ವೇದವ್ಯಾಸ ಕೃತ

# ಶ್ರೀಮದ್ಭಾಗವತಮ್




ಕನ್ನಡದಲ್ಲಿ ಲೇಖಕರು.

ಭಾಗವತರತ್ನ, ಗೀತಾಚತುರಾದಿ ಬಿರುದಾಂಕಿತ

## ಶ್ರೀ ಘೂಳಿ ಕೃಷ್ಣಮೂರ್ತಿ ಆಚಾರ್ಯ


ಸಂಪುಟ 1/4 (1, 2, 3 ಸ್ಕಂದಗಳು)

ಶ್ರೀಃ

ವೇದವ್ಯಾಸಪ್ರಣೀತ

# ಶ್ರೀಮದ್ಭಾಗವತಮ್

॥ श्री वेदव्यास मध्व पाहि ॥



ಕನ್ನಡದಲ್ಲಿ ಲೇಖಕರು

ಭಾಗವತರತ್ನ, ಗೀತಾಚತುರಾದಿ ಬಿರುದಾಂಕಿತ

## ಶ್ರೀ ಘೂಳಿ ಕೃಷ್ಣಮೂರ್ತಿ ಆಚಾರ್ಯ

ಪ್ರಕಾಶನ

ವಿಕ್ರಮ ಶ್ರಾವಣ ಬಹುಳ ಅಷ್ಟಮಿ (Aug 2000)

ಸಂಪುಟ 1/4 (1, 2, 3 ಸ್ಕಂದಗಳು)

ಶ್ರೀ ಲಕ್ಷ್ಮೀವೆಂಕಟೇಶಾಯ ನಮಃ





**ಶ್ರೀ ಘೂಳಿ ಕೃಷ್ಣಮೂರ್ತಿ ಆಚಾರ್ಯ (1906-1993)**

**ಶ್ರೀಮತಿ ರುಕ್ಮಿಣಿಬಾಯಿ (1910-1979)**

*ನಮ್ಮ ತಂದೆತಾಯಿಗಳ ಪಾದಾರವಿಂದಗಳಿಗೆ*

# ತೃತೀಯ ಮುದ್ರಣದ ಪ್ರಸ್ತಾವನೆ

# ಶ್ರೀಮದ್ಭಾಗವತಮ್

ಶ್ರೀಮದ್ಭಾಗವತವು ಪುರಾಣಗಳಲ್ಲಿ ಶ್ರೇಷ್ಠವೆನಿಸಿದೆ ಶ್ರೀವೇದವ್ಯಾಸ ಭಗವಂತನೇ ಅದರ ರಚಯಿತಾ. ಶ್ರೀಶುಕಾಚಾರ್ಯರು ವಕ್ತಾ ಶ್ರೀಪರೀಕ್ಷಿದ್ರಾಜನು ಶ್ರೋತಾ ದೇಶವು ಗಂಗಾಮಧ್ಯಗತ ಏಕಸ್ತಂಭ ಪ್ರಾಸಾದ ಇಂತಹ ವಕ್ತೃಶ್ರೋತೃ ಪ್ರಸಂಗಾದ್ಯನುಕೂಲಗಳಿಂದ ಯುಕ್ತವಾಗಿ ಶ್ರೀಭಾಗವತಶಾಸ್ತ್ರವು ಪರಮೋಪಾದೇಯವಾಗಿರಲು ಕಾರಣವೇನೆಂದರೆ ಶ್ರೀಲಕ್ಷ್ಮೀಪತಿಯ ಮಹಿಮೆಯು ಅದರಲ್ಲಿ ಅನುಪದವಾಗಿ ಪ್ರತಿಪಾದಿಸಲ್ಪಟ್ಟಿರುವುದೇ ಆಗಿದೆ

ಶ್ರೀಮದ್ಭಾಗವತವು ಭಗವದ್ಭಕ್ತರಿಗೆ ಪ್ರಿಯತಮವಾಗಿದೆ ಅಮೃತದಂತೆ ಮಧುರಾ ಸಾಪ ಮಧುರಗಾದಾಸುರತರಂಗಿಣಿಯು ಪಾವನವಾಗಿದೆ ಜ್ಞಾನಭಕ್ತಿ ವಿರಕ್ತಿಗಳಿಂದ ಲಭ್ಯವಾಗುವ ಮೋಕ್ಷಮಾರ್ಗವು ಆವಿಷ್ಕೃತವಾಗಿದೆ

ಕಲಿಮಲಸಂಸೃತಿಕಾಲನಸಾದ ಕಮಲಾರಮಣನ ಅಮಲಗುಣಗಳಿಗೆ ಎತ್ತಿಹಿಡಿದ ಕನ್ನಡಿಯಂತಿರುವ ಭಾಗವತಕ್ಕೆ ಸಮವಾದ ಪವಿತ್ರ ಗ್ರಂಥವಿನ್ನೊಂದಿಲ್ಲ ಮೋಕ್ಷಾನಂದ ವನ್ನು ಹೊಂದಲು ತೊಡಕಾಗಿರುವ ಅಹಂಮಮಕಾರಗಳೆಂಬ ರೋಗಕ್ಕೆ ಪರಮೌಷದವೀ ಗ್ರಂದರಾಜವು

ಹನ್ನೆರಡು ಸ್ಕಂಧಗಳಿಂದ 18 ಸಾವಿರ ಗ್ರಂಥರೂಪ ಬಕ್ತಿಸುಮಗಳಿಂದ, ಗೋವಿಂದ ಸುಂದರ ಪಪಾರವಿಂದರತಿ ಮಕರಂದ ರಸದಿಂದ ಶೋಭಿತವಾದ ಶ್ರೀಭಾಗವತಪಾರಿಜಾತ ವೃಕ್ಷದ ದಿವ್ಯಸುಖಕರಚ್ಛಾಯೆಯನ್ನು ಯಾವ ಬಾವುರಸಿಕನು ಸೇವಿಸದಿರುವನು?

ಪೀತಾಂಬರದಾರಿ ಶ್ರೀಹರಿಯ ಚರಣಾಂಬರದಲ್ಲಿ ಶುಕ, ಪರೀಕ್ಷಿತ, ಪಾಂಡವ, ಕುಂತೀ, ದ್ರೌಪದೀ, ದೇವಹೂತೀ, ದ್ರುವ, ಪ್ರಾಚೀನಬರ್ಹಿ, ಅಜಾಮಿಲ, ಪ್ರಹ್ಲಾದ, ನಾರದ, ಗಜರಾಜ, ಬಲಿರಾಜ, ಅಂಬರೀಷ, ಯಯಾತಿ, ಯದು, ಅಕ್ರೂರ, ಉದ್ಧವ, ದೇವಕೀ ವಸುದೇವ, ನಂದ ಯಶೋದಾ, ಮಾರ್ಕಂಡೇಯರಂತಹ ಜ್ಞಾನಾನಂದ ತೇಜಸ್ಸಂಪನ್ನರಾದ ನಕ್ಷತ್ರರಾಜರು ಬೆಳಗುತ್ತಿದ್ದಾರೆ.

ಶ್ರೀಲಕ್ಷ್ಮೀವೆಂಕಟೇಶನ ದಿವ್ಯಪದಪದ್ಮಸನ್ನಿಧಿಯಲ್ಲಿ ಶ್ರೀಪದ್ಮಾವತೀದೇವಿಯರ ಕರುಣೆಯಿಂದ ನನ್ನಂತಹ ಪಾಮರನಿಗೆ ಶ್ರೀಮದ್ಭಾಗವತವನ್ನು ಕರ್ನಾಟಬಾಷಾ ಸಂವಲಿತ ವಾಗಿಸುವಂತೆ ಪ್ರೇರಣೆಯಾದುದು 1966 ಪರಾಭವ ಸಂ|| ಬ್ರಹ್ಮೋತ್ಸವ ಸುಸಮಯ ದಲ್ಲಿ ಶ್ರೀ ಘೂಳೀ ಪ್ರಾಣೇಶರು ಭಾರತೀದೇವಿಯರು. ಶ್ರೀ ಗಣೇಶ, ಶ್ರೀ ಮಂತ್ರಾಲಯ ಗುರುರಾಜರು ನನ್ನ ಪರಮಗುರುಗಳಾದ ಶ್ರೀಸತ್ಯಧ್ಯಾನರು ನನಗೆ ಸರ್ವರೀತಿಯಿಂದ ಅನುಕೂಲಿಸಿ ಆಶೀರ್ವದಿಸುವಂತೆ ಅನುಗ್ರಹಿಸಿದ ನನ್ನ ವಿದ್ಯಾಗುರುಗಳಾದ ಶ್ರೀ ವೇ|| ಹುಲಿಗಿ ಪೂಜ್ಯ ಹುಚ್ಚಾಚಾರ್ಯರ ಸೇವಾ ಸಂಪಾದಿತ ವಚನರಚನಾ ಚತುರಿಮೆಯ

ಸುವರ್ಣಾಕರವಾಯಿತು ಶ್ರೀಮದ್ಭಾಗವತವು ಶ್ರೀಮದಾನಂದತೀರ್ಥರ ತಾತ್ಪರ್ಯ ಸರಿಯಲ್ಲಿ ಕೈಲಾದಷ್ಟು ನಡೆದು ಶ್ರೀವಿಜಯಧ್ವಜೀಯಾದಿ ವ್ಯಾಖ್ಯಾನಗಳನ್ನು ಉಪಜೀವಿಸಿ ಬರೆದೆನು ಲೇಖಿಣಿಯಂತೆ ಆ ಗ್ರಂಥದ ಎರಡು ಅಂಕನಗಳು ಮುದ್ರಿತವಾಗಿ, ಸುಜನ ಶಿರೋಮಣಿಗಳಿಗೆ ಗ್ರಾಹ್ಯವೆನಿಸಿತು ಅಧ್ಯಾಯ ಸಂಖ್ಯೆಯ ಪ್ರಕಾರ ನೋಡಿದ ಸುಹೃದರಿಗೆ-ಪುರೋಭಾಗಿಗಳಿಗಲ್ಲ-ನನ್ನ ಶ್ಲೋಕ ಶ್ಲೋಕದ ಅನುವಾದ ಸರಣಿಯು ಗೋಚರವಾಗಿ ಬಂದೀತು 18 ಸಾವಿರ ಗ್ರಂಥವೂ ಬಿಡಲ್ಪಡದೆ ಅನುಪದಿತವಾಗಿದೆ ಎಂಬ ಖ್ಯಾತಿಯು ಈ ನನ್ನ ಗ್ರಂಥಕ್ಕೆ ಪಂಡಿತರಿಂದ ಬಂದಿದೆ ಇದು ಗರ್ವದ ಮಾತಲ್ಲ ಅತಿಶಯೋಕ್ತಿಯೂ ಅಲ್ಲ

ಅಮೃತಂ ಕ್ಷೇಮಂ ಅಭಯಂ ಎಂದು ತ್ರಿಗುಣಾತೀತನ, ತ್ರಿನೇತ್ರಾದಿತ್ರಾತನ, ತ್ರಯೀಪ್ರತಿಪಾದ್ಯನ, ತ್ರಿವಿಕ್ರಮ ಪಾದಗಳು, ಕ್ಷೇಮ ಎಂದರೆ ಶ್ವೇತದ್ವೀಪ, ಅಭಯ ಎಂದರೆ ಅನಂತಾಸನ, ಅಮೃತವೆಂದರೆ ವೈಕುಂಠ

ಎರಡಾಗಿವೆ ಈಗ ಮೂರನೆಯ ಮುದ್ರಣವೂ ಆಗುತ್ತಿರುವುದು, ಯಾವ ಗುರು ಹಿರಿಯರ ಕೃಪಾವಿಶೇಷವೋ, ಯಾವ ಮಾಹಾತ್ಮ್ಯವಿದ್ವಿದ್ವಜ್ಜನರ ಉದಾರತೆಯೋ, ಯಾವ ಶ್ರೀಗುರುರಾಜಾಂತರ್ಗತ ಶ್ರೀ ಪೂಳೀ ಭಾರತೀಶಸ್ವಾಮಿ ಶ್ರೀ ಲಕ್ಷ್ಮೀವೇಂಕಟೇಶನ ಪರಮಾನುಗ್ರಹವೋ ಎಂಬುದನ್ನು ನನ್ನನ್ನು ಕೇಳಬೇಡಿ ಅದನ್ನು ಪ್ರಾತಃಸ್ಮರಣೀಯ ಪಂಡಿತ ಮಂಡನಾಯಮಾನ ಪೂಜ್ಯ ಶ್ರೀ ಗೌಡಗೆರೆ ಆಚಾರ್ಯ ಕುಲತಿಲಕರೂ, ಬಹು ಪವಿತ್ರ ಗ್ರಂಥ ಮುದ್ರಣ ಬದ್ಧಹಸ್ತರೂ, ನನ್ನ ಸಹೃದಯ ಮಿತ್ರರೂ ಆದ ಶ್ರೀ ಪೂಜ್ಯ ಡಿ ಎಸ್ ಕೃಷ್ಣಾಚಾರ್ಯರನ್ನೂ, ಅವರ ಮುದ್ರಣ ಕ್ರಿಯೆಗೆ ಭದ್ರತಳವಾಗಿ ಆರ್ಥಿಕ ಸಹಾಯವನ್ನು ಅತ್ಯಂತೋದಾರ ಮನಸ್ಸಿನಿಂದ ಮಾಡಿದ ಗ್ರಂಥ ಪ್ರಕಾಶಕ ಶ್ರೀ ಬಿ ಎಸ್ ವಾಸುದೇವರಾಯರನ್ನೂ ಕೇಳಿ ತಿಳಿಯಬಹುದಾಗಿದೆ

ನನ್ನ 80 ವರ್ಷದ ಪಲೀಪಲಿಹಸ್ತವು ಪ್ರಶಸ್ತ ಕಾರ್ಯನ್ಯಸ್ತವಾಗುವಂತೆ ನೆರವಿತ್ತ ಶ್ರೀ ವಾಸುದೇವರಾಯರಿಗೆ ಅವರ ಪರಮೋದಾರ ಕೃತಿಯನ್ನು ಸ್ವೀಕರಿಸಿ, ಸಂತಸಪಡುವ ಸಜ್ಜನರಿಗೂ ನಾನು ಚಿರಋಣಿಯಾಗಿ ಶಿರಬಾಗಿ ನಮಿಸಿ, ಶ್ರೀಹರಿವಾಯುಗುರುಗಳ ಚರಣಾರವಿಂದಗಳಲ್ಲಿ ಏತತ್ಕೃತಿರತ್ನವನ್ನು ಸಮರ್ಪಿಸಿ, ಶ್ರೀಮತಾಂಪರರ ಶ್ರೇಯಸ್ಸನ್ನು ಪ್ರಾರ್ಥಿಸುತ್ತಿರುವೆನು.

|| ಓಂ ತತ್ ಸತ್ ||

ಬಳ್ಳಾರಿ
ಪ್ರಭವ ವೈಶಾಖಶುದ್ಧ ದಶಮೀ

ಭಗವದ್ಭಕ್ತಪರವರ್ತಿ
ಘೂಳೀ ಕೃಷ್ಣಮೂರ್ತ್ಯಾಚಾರ್ಯ

# ಪ್ರಕಾಶಕರ ನುಡಿ

ಶ್ರೀಃ

ಶ್ರೀ ಗುರುಭ್ಯೋನಮಃ

ನಮ್ಮ ಗುರುಗಳಾದ ಮತ್ತು ಪಿತೃಗಳಾದ ಶ್ರೀ ಘೂಳಿ ಕೃಷ್ಣಮೂರ್ತಿ ಆಚಾರ್ಯರು, ತಮ್ಮ ಜೀವನದಲ್ಲಿ ಶ್ರದ್ಧಾ, ಜ್ಞಾನ, ಬಕ್ತಿ ಮತ್ತು ವೈರಾಗ್ಯವನ್ನು ಹೊಂದಿ ಶ್ರೀಮಧ್ವಾಚಾರ್ಯರ ಮತ್ತು ಅವರ ಶಿಷ್ಯ ಪರಂಪರೆ ಯತಿಗಳ ಮತ್ತು ಶಾಸ್ತ್ರ, ಪಠನ, ಪ್ರವಚನ, ಉಪದೇಶ ಲೇಖಿಸದಲ್ಲಿ ಚತುರರಾದ ಶ್ರೇಷ್ಠ ಪುರುಷರು ತೋರಿದ ಮಾರ್ಗ ದಲ್ಲಿ ತಮ್ಮ ಶಾಸ್ತ್ರಾಭ್ಯಾಸವನ್ನು ಮಾಡಿ ಅನೇಕ ಗ್ರಂಥಗಳನ್ನು ಕನ್ನಡ ಬಾಷೆಯಲ್ಲಿ ಸರ್ವಸಾಮಾನ್ಯರಿಗೂ ತಿಳಿದು, ಮನಮುಟ್ಟುವಂತೆ ಬರೆದು ತಮ್ಮ ಗುರುವಂತರ್ಯಾಮಿ ಶ್ರೀ ಲಕ್ಷ್ಮೀವೆಂಕಟೇಶನ ಪಾದಪದ್ಮಗಳಿಗೆ ಸಮರ್ಪಿಸಿ ತಮ್ಮ ಜೀವನವನ್ನು ಸಾರ್ಥಕ ಗೊಳಿಸಿಕೊಂಡಿದ್ದಾರೆ ಈ ವಿಷಯವನ್ನು ಸ್ವತಃ ಅವರೇ ತಮ್ಮ ಪ್ರಸ್ತಾವನೆಯಲ್ಲಿ ಉಲ್ಲೇ ಖಿಸಿಕೊಂಡಿದ್ದಾರೆ ಅವರು ಬರೆದ ಅನೇಕ ಗ್ರಂದಗಳಲ್ಲಿ ಬಹಳ ಜನಪ್ರಿಯವಾದದ್ದು "ಶ್ರೀಮದ್ಭಾಗವತಮ್" ಅವರ ಬಾಗವತ ಪ್ರವಚನವು ಕರ್ನಾಟಕದಲ್ಲಿಯೇ ಅಲ್ಲದೆ ಮುಂಬೈ, ವಾರಣಾಸಿ, ಹೈದರಾಬಾದ್ ಮತ್ತು ದಕ್ಷಿಣದಲ್ಲಿ ಜನಾಕರ್ಷಿತವಾಗಿತ್ತು ಇವರ ಈ ಶ್ರೀಮದ್ಭಾಗವತವನ್ನು ಹೈದರಾಬಾದಿನ ಬಾಗೆಲಿಂಗಂಪಲ್ಲಿ, ಶ್ರೀ ರಾಘವೇಂದ್ರಸ್ವಾಮಿ ಬೃಂದಾವನ ಸಮಿತಿ ಪರವಾಗಿ ಪ್ರಕಟವಾಗುವ ತೆಲುಗು ಬಾಷೆಯ ತತ್ವವಾದ ಮಾಸಪತ್ರಿಕೆ ಯಲ್ಲಿ ಶ್ರೀ ಮಾಳಿಗಿ ಬೀಮಸೇನಾಚಾರ್ಯರ ತೆಲುಗು ಬಾಷೆಯ ಅನುವಾದ ತುಂಬಾ ವರ್ಷಗಳಿಂದ ಪ್ರಸಾರವಾಗುತ್ತಿದೆ

ನಮ್ಮ ತಂದೆಯವರು ಬರೆದ ಇತರ ಗ್ರಂಥಗಳ ವಿವರಣೆ ಮುಂದಿನ ಪುಟದಲ್ಲಿ ಸೂಚಿಸಲಾಗಿದೆ. ಅವರು ಬರೆದ ಶ್ರೀ ಚಾಮುಂಡಿ ಸುಪ್ರಬಾತ ಮತ್ತು ಶ್ರೀ ರಾಘವೇಂದ್ರ ಸುಪ್ರಬಾತ ಧ್ವನಿಸುರುಳಿಯಲ್ಲಿ ಶ್ರೀ ಪಿ ಬಿ ಶ್ರೀನಿವಾಸ್ ಮತ್ತು ಬಿ ಕೆ ಸುಮಿತ್ರ ಅವರಿಂದ ಧ್ವನಿಮುದ್ರಣಗೊಂಡಿದೆ ಆದರೆ ಇವು ಯಾವುವೂ ಉಪಲಬ್ಧವಿಲ್ಲ

ನಮ್ಮ ತಂದೆಯವರು ಜುಲೈ 1993ರಲ್ಲಿ ಸ್ವರ್ಗಸ್ಥರಾದ ನಂತರ ಅವರು ಬರೆದ 'ಶ್ರೀಮದ್ಭಾಗವತಮ್' ಪುಸ್ತಕಕ್ಕೆ ಬಹಳ ಬೇಡಿಕೆ ಬಂತು ರಾಘವೇಂದ್ರಾಶ್ರಮದವರು ಮುದ್ರಿಸಿದ ಈ ಗ್ರಂದವು ಉಪಲಬ್ಧವಿದ್ದಿಲ್ಲ ಈ ಕಾರಣದಿಂದಾಗಿ ಶ್ರೀ ಹರಿವಾಯುಗುರು ಗಳ ಮತ್ತು ನನ್ನ ಅಂತರ್ಯಾಮಿ ಶ್ರೀ ಲಕ್ಷ್ಮೀವೆಂಕಟೇಶನ ಪ್ರೇರಣೆಯಿಂದ ಮತ್ತು ನಮ್ಮ ತಂದೆತಾಯಿಯರ ಆಶೀರ್ವಾದದಿಂದ ಈ ಮಹಾಗ್ರಂಥವನ್ನು ಪುನಃ ಮುದ್ರಿಸಲು ಸಾಹಸ ಮಾಡಿದ್ದೇನೆ ಅವರ ಆಶೀರ್ವಾದ ಹಾಗೂ ಅನುಗ್ರಹದಿಂದ ನನ್ನ ಈ ಅಳಿಲು ಸೇವೆ ಕಾರ್ಯಸಾಧನೆಯಾಗುವುದೆಂದು ನಂಬಿದ್ದೇನೆ ಈ ಕಾರ್ಯಕ್ಕೆ ನನ್ನ ತಮ್ಮಂದಿರು ಹಾಗೂ ತಂಗಿಯರು ಸಕುಟುಂಬವಾಗಿ ಪ್ರೋತ್ಸಾಹಿಸಿದ್ದಾರೆ

ಈ ಶ್ರೀಮದ್ಭಾಗವತಮ್ ಗ್ರಂದವನ್ನು ಪಠನೆ ಮಾಡಲು ಸುಲಭವಾಗುವಂತೆ ನಾಲ್ಕು ಬಾಗಗಳಲ್ಲಿ ಮುದ್ರಿಸಿದ್ದೇವೆ ವೈಷ್ಣವ ಮಹಾಬಕ್ತರಲ್ಲದೆ, ಇನ್ನಿತರರು ಕೂಡ ಅತಿ ಸರಳವಾಗಿ ಹಾಗೂ ಅರ್ದವಾಗುವಂತೆ ಬರೆದ ಈ ಶ್ರೀಮನ್ನಾರಾಯಣನ ಚಿತ್ರಚರಿತ್ರೆ, ಅವನ ಭಕ್ತರ ಜೀವನಕಥೆ ಓದಿ ಶ್ರೀ ಲಕ್ಷ್ಮೀವೆಂಕಟೇಶನ ಪ್ರಸಾದಕ್ಕೆ ಪಾತ್ರರಾಗುವಿರೆಂದು ಹಾರೈಸಿ ನನ್ನ ಈ ಅಲ್ಪಸೇವೆಯನ್ನು ನಮ್ಮ ಗುರುಹಿರಿಯರಾದ ತಂದೆತಾಯಿಗಳಿಗೆ ಒಪ್ಪಿಸಿ, ಪೂಜ್ಯರಾದ ಆಚಾರ್ಯರಿಗೆ ನಮಿಸಿ ಈ ಗ್ರಂದವನ್ನು ಪ್ರಕಟಿಸುತ್ತಿದ್ದೇನೆ ಬಕ್ತಾದಿಗಳು ಸುಲಬ ಬೆಲೆಯಲ್ಲಿ ಪ್ರಕಟಿಸಿದ ಈ ಗ್ರಂದವನ್ನು ಸದ್ವಿನಿಯಿಗೋಸಿ ಹಾಗೂ ಪ್ರೋತ್ಸಾಹಿಸುವರೆಂದು ನಂಬಿದ್ದೇನೆ

ಈ ಭಾಗವತ ಮಹಾಗ್ರಂಥವನ್ನು ಅತಿಸುಂದರವಾಗಿ, ತಪ್ಪುಗಳಿಲ್ಲದೆ ಯಥಾವತ್ತಾಗಿ ಅಚ್ಚುಕಟ್ಟಾಗಿ ಮುದ್ರಿಸಿದ ನಮ್ಮ ಬಂದುಗಳಾದ ಶ್ರೀ ನರಹರಿರಾವ್, ಪಾರಿಜಾತ ಪ್ರಿಂಟರ್ಸ್, ಕೆ ಆರ್. ಮೊಹಲ್ಲಾ, ಮೈಸೂರು ಅವರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು ಶ್ರೀ ರುಕ್ಮಿಣೀಸತ್ಯಭಾಮಾ ಸಮೇತ ಶ್ರೀ ಗೋಪಾಲಕೃಷ್ಣನು ಅವರಿಗೆ ಇತೋಪ್ಯತಿಶಯವಾಗಿ ಅನುಗ್ರಹಿಸಲೆಂದು ಹಾರೈಸುವೆ

22-8-2000, ಇಂತಿ ನಿಮ್ಮ ವಿಶ್ವಾಸಿ,

ವಿಕ್ರಮ ಶ್ರಾವಣ ಬಹುಳ ಕೃಷ್ಣಾಷ್ಟಮಿ ಘೂಳಿ ಶ್ರೀನಿವಾಸಮೂರ್ತಿ ಆಚಾರ್ಯ

# ಶ್ರೀ ಘೂಳಿ ಕೃಷ್ಣಮೂರ್ತಿ ಆಚಾರ್ಯರ ಕೃತಿಗಳು

1 ಶ್ರೀಮದ್ಭಾಗವತಮ್

2 ಶ್ರೀಮದ್ಭಾಗವತ ಸಾರಾಮೃತಂ

3 ಶ್ರೀಮದ್ಭಾಗವತ ಸಾರೋದ್ಧಾರಾಮೃತಂ

4 ಶ್ರೀ ಮಹಾಬಾರತಂ

5 ಶ್ರೀ ಹರಿವಂಶಾಮೃತಂ

6 ಶ್ರೀ ಗೀತಾಮೃತಂ

7 ಶ್ರೀ ದರ್ಮಾಮೃತಂ ಮತ್ತು ಗರುಡಾಮೃತಂ

8 ಶ್ರೀ ಶ್ರೀನಿವಾಸ ಕಲ್ಯಾಣಾಮೃತಂ

9 ಶ್ರೀ ರಾಮನಾಮಾಮೃತಂ ಮತ್ತು ಶ್ರೀ ಭಗವತ್ ಸಂದಾನಾಮೃತಂ

10 ಚತುಃಶ್ಲೋಕ ಭಾಗವತ (ಅರ್ಧಸಹಿತ)

11 ಶ್ರೀ ದಶೋಪನಿಷದಮೃತಂ (5 ಉಪನಿಷತ್ತುಗಳು ತೆಲುಗು ಬಾಷೆಯಲ್ಲಿ)

12 ಶ್ರೀ ಬ್ರಹ್ಮಘಟ್ಟ ಸಮೀರಕುಮಾರ ವಿಜಯ

13 ಶ್ರೀ ಸಂಧ್ಯಾಚಂದ್ರಿಕೆ ಮತ್ತು ಸಂಕ್ಷಿಪ್ತದೇವಪೂಜ (ಅರ್ಧಸಹಿತ)

14 ಶ್ರೀ ಚಾಮುಂಡಿ ಸುಪ್ರಬಾತ

15 ಶ್ರೀ ರಾಘವೇಂದ್ರ ಸುಪ್ರಬಾತ

16 ಶ್ರೀ ಹರಿಗುರು ಶ್ರವಣಮಾಲಿಕೆ

17 Cassette Tape (ಶ್ರೀ ಚಾಮುಂಡಿಸುಪ್ರಬಾತ
ಮತ್ತು ಶ್ರೀ ರಾಘವೇಂದ್ರ ಸುಪ್ರಭಾತ)

# ಅನುಕ್ರಮಣಿಕೆ

## ಪ್ರಥಮ ಸ್ಕಂಧ



## ದ್ವಿತೀಯ ಸ್ಕಂಧ

## ತೃತೀಯ ಸ್ಕಂದ

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||

# ಶ್ರೀಮದ್ಭಾಗವತಮ್

## ಪ್ರಥಮಸ್ಕಂಧವು

|| ಹರಿಃ ಓಂ ||

**ಜನ್ಮಾದ್ಯಸ್ಯ ಯತೋऽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್ ।**
**ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯಂ ಸೂರಯಃ ||**
**ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ ।**
**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ||**

ಶ್ರೀಮದ್ವೇದವ್ಯಾಸದೇವರು, ಬ್ರಹ್ಮರುದ್ರೇಂದ್ರಾದಿಗಳಿಂದ ಪ್ರಾರ್ಥಿತರಾಗಿ, ಕಲಿಕಾಲ ಬಲದಿಂದ ಕಲುಷಿತಚಿತ್ತರಾಗಿ ನೊಂದ ಸಜ್ಜನರ ಉದ್ಧಾರ ಮಾಡಬೇಕೆಂದು ಕರುಣೆಯಿಂದ, ಬಹುಕಾಲ ತಪಸ್ಸನ್ನು ಮಾಡಿ ಪರಿಶುದ್ಧಳಾದ ಸತ್ಯವತಿದೇವಿಯಲ್ಲಿ ಶ್ರೀಪರಾಶರರಿಂದ ಆವಿರ್ಭೂತರಾಗಿ, ಮೊತ್ತಮೊದಲು ವೇದಗಳ ವಿಬಾಗ ಮಾಡಿ ಪೈಲಾದಿ ಶಿಷ್ಯರಿಗೆ ಉಪದೇಶಿಸಿದರು.

ವೇದಾದಿಕಾರವಿಲ್ಲದ ಅಲ್ಪಮತಿಗಳಲ್ಲಿ ದಯದಿಂದ ಪಂಚಮವೇದವಾದ ಭಾರತ ವನ್ನು ರಚಿಸಿದರು ಸಮಂಚಿತವಾದ ಅಷ್ಟಾದಶ ಪುರಾಣಗಳಲ್ಲಿ ಬಾಗವತವಲ್ಲದ ಇತರ ಪುರಾಣಗಳನ್ನೂ ರಚಿಸಿದರು ಇಷ್ಟರಿಂದಲೂ ಸರ್ವಸಜ್ಜನರ ಕಷ್ಟನಿವಾರಣೆಗೆ ಕಾರಣವಾದ ಜ್ಞಾನಕಾರ್ಯವು ಸಂಪೂರ್ಣವಾಗಿ ಆಗಲಿಲ್ಲವೆಂದರಿತ ಶ್ರೀಬಾದರಾಯಣರು ನಾರದರಿಂದ ಆದರದಿಂ ಪ್ರಾರ್ದಿತರಾಗಿ ಹನ್ನೆರಡು ಸ್ಕಂದಗಳಲ್ಲಿ ಹದಿನೆಂಟು ಸಾವಿರ ಗ್ರಂದದಿಂ ಕೂಡಿ ರಮ್ಯಮಾದ ಬಾಗವತವನ್ನು ರಚಿಸಿ ತಮ್ಮ ಅವತಾರ ಕಾರ್ಯವಿದರಿಂದ ಪೂರ್ತಿ ಯಾಯಿತೆಂದು ತೃಪ್ತಿಹೊಂದಿದರು

ಶ್ರೀಕೃಷ್ಣನಿಗೆ ಯಾವ ವಿಘ್ನಗಳಿಲ್ಲ, ಆದರೂ ಅವನ ಸ್ಮರಣೆಯೇ ಸರ್ವವಿಘ್ನ ನಿವಾರಣವು, ಸರ್ವಶ್ರೇಯಃಕಾರಣವೆಂದು ಸಜ್ಜನರಿಗೆ ತಿಳಿಸಿ, ಗ್ರಂದಾರಂಬದಲ್ಲಿ ಅವಶ್ಯಾನುಷ್ಠೇಯವಾದ, ಶಿಷ್ಟಾಚಾರಪರಂಪರೆಯಿಂದ ಬಂದ, ನತಿಸ್ಮರಣಾದಿರೂಪವಾದ ಮಂಗಳಾಚರಣೆಯು ಆಯುಷ್ಮತ್‌ಪುರುಷಕವಾಗುವುದೆಂದು ಪ್ರಕಟಿಸಲು, ತಾವೇ ಬಗವತ್ ಸ್ವರೂಪರಾಗಿದ್ದು ಕೂಡ, ನಕಲ ಕಲ್ಯಾಣಗುಣಪೂರ್ಣನೂ, ಸರ್ವದೋಷ ವಿದೂರನೂ ಸರ್ವಸಚ್ಛಾಸ್ತ್ರ ಮುಖ್ಯಾರ್ದನೂ, ಸರ್ವಮುಕ್ತಾಮುಕ್ತ ಜೀವನಿಯಾ ಮಕನೂ, ಕರುಣಾಸಮುದ್ರನೂ, ಸರ್ವವ್ಯಾಪ್ತನೂ ಆದ ಶ್ರೀಲಕ್ಷ್ಮೀನಾರಾಯಣನನ್ನು ಸ್ಮರಿಸಿ ಮಂಗಳವನ್ನು ಮಾಡುತ್ತಿದ್ದಾರೆ

ಯಾವ ನಿರ್ದುಃಖನಿರತಿಶಯಾನಂತ ಜ್ಞಾನಾನಂದಾದಿ ಗುಣಾಕರನಾದ ಶ್ರೀಶನಿಂದ ಈ ಜೀವಜಡಾತ್ಮಕವಾದ ನಕಲ ಜಗತ್ತಿಗೂ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನಾಜ್ಞಾನ, ಬಂದ-ಮೋಕ್ಷಗಳು ಯಧಾ ಯೋಗ್ಯವಾಗಿ ಆಗುತ್ತಿವೆಯೋ, ಯಾವ ವೈದೇಕ ವೇದ್ಯನಾದ ರಮೇಶನು ಉಪಕ್ರಮಾದಿ ತಾತ್ಪರ್ಯನಿರ್ಣಾಯಕ ಲಿಂಗಗಳಿಂದಲೂ, ಸತ್ತರ್ಕದಿಂದಲೂ ಸಚ್ಛಾಸ್ತ್ರವೆನಿಸುವ ಋಗ್ಯಜುಸ್ಸಾಮಾದರ್ವ, ಬಾರತ, ಮೂಲ ರಾಮಾ ಯಣ, ಪಂಚರಾತ್ರಾಗಮಾದಿ ಗ್ರಂಧಗಳ ಶ್ರವಣಾದಿ ವಿಚಾರ ಮಾಡಲು ತಿಳಿಯಲ್ಪಡು ವನೋ, ಯಾವ ಸರ್ವಜ್ಞನಾದ ಕಮಲನಾಬನು ತನ್ನ ಮಗನಾದ ಆದಿಕವಿ ಬ್ರಹ್ಮದೇವನಿಗೆ ಪ್ರೀತಿಯಿಂದ ವೇದಾದಿಗಳನ್ನೆಲ್ಲ ಸಾಂಗವಾಗಿ ಉಪದೇಶಿಸಿದನೋ, ಯಾವ ಸರ್ವೇಶ್ವರ ನಾದ ಪುರುಷೋತ್ತಮನು ಜ್ಞಾನಿಗಳಾದ ಬ್ರಹ್ಮಾದಿಗಳಿಂದಲೂ ಪೂರ್ಣವಾಗಿ ತಿಳಿಯಲ್ಪಡ ಲಶಕ್ಯವಾದ ಮಹಿಮೆ ಉಳ್ಳವನೋ, ಯಾವ ಸಮರ್ದನಾದ ಶ್ರೀಹರಿಯು ತನಗೆ ಪ್ರಯೋ ಜನವಿಲ್ಲದಿದ್ದರೂ ಕರುಣೆಯಿಂದ ಸಜ್ಜನರಕ್ಷಣೆ ಮಾಡಲು ಈಶ್ವರ-ಜೀವ-ಜಡ ಸೃಷ್ಟಿಯನ್ನು ಮಾಡಿರುವನೋ, ಯಾವ ಪಾಪಟ್ಯಾದಿ ಸರ್ವದೋಷ ದೂರನಾದ ಮಾಯಾ ರಮಣನು ಅನಾದಿಕಾಲದಿಂದ ಸಂಸಾರೋಪಕ್ರಮವೇ ಇಲ್ಲದ ನಿತ್ಯಮುಕ್ತಳಾದ ಮಾಯಾ ದೇವಿಯಿಂದ ಕೂಡಿ ಜಗತ್ಸರ್ಜನಾದಿ ವ್ಯಾಪಾರ ಮಾಡಿ ಜೀವರಿಗೆ ಸ್ವಯೋಗ್ಯ ಮುಕ್ತಿ ಪ್ರದಾಯಕನಾಗಿರುವನೋ, ಅಂತಹ ಶ್ರೀಮನ್ನಾರಾಯಣನಿಗೆ ಮನಸ್ಕಾರವು! ಶ್ರೀಹರೇ ನಮ್ಮ ಮನಸ್ಸು ನಿನ್ನಲ್ಲೇ ರಮಿಸಲಿ!

ನಕಲವಾಙ್ಮನೋನಿಯಾಮಕಳಾದ ಲಕ್ಷ್ಮೀದೇವಿಗೂ, ಸರ್ವಪ್ರಾಣಿ ಪ್ರವರ್ತಕ ನಾದ ಜೀವೋತ್ತಮನಾದ ಮುಖ್ಯಪ್ರಾಣನಿಗೂ, ವಿದ್ಯಾದೇವಿಯೆನಿಸಿದ ಭಾರತೀ ದೇವಿಗೂ, ನಕಲ ತತ್ತ್ವೇಶರಿಗೂ, ಕ್ಷಿಪ್ರಪ್ರಸಾದನಾದ ಶ್ರೀವಿಘ್ನರಾಜನಿಗೂ, ಶ್ರೀ ಟೀಕಾಕೃತ್ಪಾದರಿಗೂ, ಕರುಣಾವರುಣಾಲಯರಾದ ಶ್ರೀರಾಘವೇಂದ್ರತೀರ್ಧ ಗುರು ಸಾರ್ವಭೌಮರಿಗೂ, ಶ್ರೀ ಪುರಂದರದಾಸವರ್ಯರಿಗೂ, ಅಸ್ಮತ್ಪರಮಗುರುಗಳಾದ ಶ್ರೀಸತ್ಯಧ್ಯಾನಯತಿಪುಂಗವ ರಿಗೂ, ಅಸ್ಮದ್ಗುರುವರರಾದ ಹುಲಿಗೀ ಆಚಾರ್ಯರಿಗೂ ಶಿರಸಾ ನಮಿಸಿ, ವಚಸಾ ಸ್ತುತಿಸಿ,

ಮನಸಾ ಸ್ಮರಿಸಿ, ಶ್ರೀ ಬಾಗವತ ಪುರಾಣ ವಚನವನ್ನು ರಚಿಸಲುದ್ಯುಕ್ತನಾದ ನನ್ನಲ್ಲಿ ನಕಲ ಬಗವದ್ಬಕ್ತರು ಅನುಗ್ರಹಿಸಲಿ !

ಶ್ರೀಬಾಗವತಮಹಾಪುರಾಣ ಪಾರಿಜಾತ ಪಾದಪಸಮಾಶ್ರಯಣವೆನಗೆ ಶ್ರೀಹರಿ ಕರುಣಾವಿಶೇಷದಿಂದಲೂ, ಶ್ರೀಮೂಳೀಪ್ರಾಣೇಶನ ಪರಮಾನುಗ್ರಹದಿಂದಲೂ, ಶ್ರೀ ಗುರುರಾಜರ ವರಪ್ರಸಾದದಿಂದಲೂ, ಲಬಿಸಿತಲ್ಲದೇ ಮಹಾಕಾವ್ಯ ನಿರ್ವಹಣೆಯಲ್ಲಿ ಸಮರ್ದನಲ್ಲವೆಂದರಿತಿದ್ದರೂ ಶ್ರೀಮತ್ಪೂರ್ಣಪ್ರಮತಿ ಗುರುಮುಖ್ಯಸ್ವೋತ್ತಮಜನ ಕಾರುಣ್ಯಸರಣಿಯಲ್ಲಿ ಸಾಗುವ ನನ್ನ ಜನ್ಮವೇ ದನ್ಯವಾದೀತೆಂದು ಬಗೆದು ಶ್ರೀ ಭಾಗವತಾಮೃತವೆಂಬೀ ವಚನಕಾವ್ಯ ರಚನೆಯಲ್ಲಿ ತೊಡಗುವ ನನ್ನ ಸಾಹಸವನ್ನು ಸಜ್ಜನರು ಮನ್ನಿಸದೆ ಇರರೆಂಬ ನಂಬಿಗೆಯೇ ನನ್ನನ್ನು ಮುಂದಕ್ಕೆ ಕರೆದೊಯ್ಯುತ್ತದೆ

ನಂದಗೋಕುಲ ವಿಹಾರಿಯು, ಬಕ್ತದುಃಖಪರಿಹಾರಿಯು, ಗೋಪನಿತಂಬಿನೀ ಮನೋಹಾರಿಯು, ದುಷ್ಟಜನಸಂಹಾರಿಯು, ಹಾರಿಯು ಆದ ಹರೇ! ನನ್ನನ್ನು ನಿನ್ನವ ನೆನಿಸು! ಶ್ರೀಬ್ರಹ್ಮಸೂತ್ರಗಳಿಗೆ ಅರ್ದವಿವರಣರೂಪವು, ಗಾಯತ್ರೀ ಸಮಾರಂಬವು, ವೃತ್ರಾಸುರ ವದ ನಿರೂಪಕವು, ಹಯಗ್ರೀವ ಬ್ರಹ್ಮವಿದ್ಯಾ ಪರಮಪವಿತ್ರ ವಿಷಯ ಪ್ರತಿಪಾದಕವಾದ್ದರಿಂದ ಶ್ರೀಮದ್ಬಾಗವತವು ಸಜ್ಜನೋಪಾದೇಯತಮವಾಗಿದೆ, ಶ್ರೀ ವೇದವ್ಯಾಸರಿಂದ ರಚಿತವಾದ್ದರಿಂದಲೂ, ಸದ್ಬಕ್ತಿಯಿಂದ ಕೇಳುವವರ ವಿಮಲ ಚಿತ್ತ ಗಳಲ್ಲಿ ಶ್ರೀಹರಿಯು ನೆಲೆಸಿ ಉದ್ದರಿಸುವವನಾದ್ದರಿಂದಲೂ, ಶ್ರವಣಮಾತ್ರದಿಂದ ಶ್ರುತಿಮನೋಹರವಾದ್ದರಿಂದಲೂ, ಶ್ರೀಮಂತವೆನಿಸಿದೆ ಈ ಮಹಾಪುರಾಣವನ್ನು ಸ್ವೋತ್ತಮಜನರಲ್ಲಿ ನಿರ್ಮತ್ಸರರಾದ ಸಜ್ಜನರು ಕೇಳಲರ್ಹರೆನಿಸುವರು ಆದ್ಯಾತ್ಮಿಕಾದಿ ಭೌತಿಕಾದಿದೈವಿಕರೂಪ ತಾಪತ್ರಯಂಗಳನ್ನು ನಾಶಗೊಳಿಸಿ, ಪರಮಮಂಗಲ ರೂಪವಾದ ಮೋಕ್ಷಸುಖವನ್ನಾಪಾದಿಸಿ, ಮಹಾಪಲಪ್ರದವೆನುವ ಶ್ರೀಮದ್ಬಾಗವತದಲ್ಲಿ ದರ್ಮಶಬ್ದ ವಾಚ್ಯನಾದ ಶ್ರೀಹರಿಯೇ ಮುಖ್ಯವಿಷಯನಾಗಿ ಪ್ರತಿಪಾದಿಸಲ್ಪಟ್ಟಿರುವನು. ಆ ಶ್ರೀಹರಿಯ ಪರಮ ಪ್ರಸಾದ ಸಾದನವೆನಿಸಿದ ತ್ರಿಂಶದ್ವಿದ ಬಾಗವತ ದರ್ಮಗಳೂ ನಿರೂಪಿತವಾಗಿರು ವವು ಕಾಪಟ್ಯವಿಲ್ಲದೆ ಕೇವಲ ಶ್ರೀಶಪ್ರೀತಿಯೇ ಸಾಕೆಂದು ಬಯಸಿ ಬಜಿಸುವ ಬಗವದ್ಬಕ್ತ ರಿಗೆ ಭಾಗವತದಲ್ಲಿ ಶ್ರೀಹರಿಯ ದರ್ಶನವಾಗುವದು ಇತರ ಪುರಾಣಗಳಿಂದೇನು? ಸಾದನ ಸಾಮಗ್ರಿಯು ಸಂಪೂರ್ಣವಾಗಿರುವ ಏಕಾಂತ ಭಕ್ತರಿಗೆ ಬಾಗವತವನ್ನು ಕೇಳಲುಪಕ್ರಮಿಸಿ ದಾಕ್ಷಣವೇ ಶ್ರೀಹರಿಯು ಅವರ ಹೃತ್ಕಮಲಗಳಲ್ಲಿ ನೆಲೆಸಿ ಪರಮಾನಂದಪ್ರದನಾಗುವನು ಇದಕ್ಕೆ ಸಂಶಯವಿಲ್ಲ

ವೇದಕಲ್ಪವೃಕ್ಷದ ಪಲರೂಪವಮಾದ ಶ್ರೀಕೃಷ್ಣದ್ವೈಪಾಯನರ ಕರುಣೆಯೆಂಬ ದೋಟಿಯಿಂದ—ದೇವಯೋಗ್ಯಮಾದರೂ ಬೂಮಿಗೆ—ಕೆಳಗಿಳಿಸಲ್ಪಟ್ಟ ಶುಕಗುರು ಮುಖಾಂಬುಜನಿಃಸೃತಾಮೃತರಸನಿಷ್ಯಂದಿನಿಯು, ಶ್ರೀಹರಿಕದಾಮಂದಾಕಿನಿಯು ಆದ, ಈ

ಬಾಗವತಾಮೃತರಸವನ್ನು ಬಕ್ತಜನರೇ! ನಾರಾನಾರ ವಿವೇಕಿಗಳಾದ ನಜ್ಜನರೇ! ನೇವಿಸಿರಿ! ಮರಣಪರ್ಯಂತವು ಅಲ್ಲ, ಆಮೇಲೂ ಲಿಂಗಬಂಗಪರ್ಯಂತವೂ ಅಲ್ಲ, ಅದಾದ ಮೇಲೂ, ಮುಕ್ತಿ ನಾಮ್ರಾಜ್ಯದಲ್ಲೂ ನೇವಿಸಿರಿ!

ವೀತಶೋಕರಾದ ಮುಕ್ತರು ಕೃಷ್ಣನನ್ನು ಅದ್ಯಾಪಿ ನೇವಿಸುತ್ತಿದ್ದಾರೆ!

## ೧ ಸೂತಶೌನಕ ಸಂವಾದವು

ಅನಿಮಿಷಕ್ಷೇತ್ರವೂ, ಪರಮಪವಿತ್ರವೂ, ಮುನಿವಲ್ಲಬಶರಣ್ಯವೂ, ಪರಮ ಪುಣ್ಯವೂ, ಕುನುಮಫಲಬರಿತವೂ ನಂತತಗೇಗೀಯಮಾನ ಹರಿಪಾವನಚರಿತವೂ ಗೋಮತೀತರಂಗಮಂಗಲವೂ, ಸುದರ್ಶನತೀರ್ದ ಮಜ್ಜನ ಕೃತಾದ ನಾರ್ದವಾಹ ನಜ್ಜನವೂ ಆದ ನೈಮಿಷಾರಣ್ಯದಲ್ಲಿ ಶೌನಕಾದಿ ಮುನಿಗಳೊಂದು ನತ್ರಯಾಗವನ್ನು ಮಾಡುತ್ತಲಿದ್ದರು ಸ್ವರ್ಗಾದಿ ವಿಷಯವಿರಕ್ತರಾಗಿ ಸ್ವರೂಪಬೂತ ಸುಖಾಪಾದಕ ಮೋಕ್ಷವನ್ನು ಬಯಸಿ, ಆ ಮುನಿವರ್ಯರು ಲೋಕಾನುಕಂಪಾರ್ದವಾಗಿ ಒಂದು ಜ್ಞಾನ ಪ್ರಚುರವಾದ ನತ್ರಯಾಗವನ್ನು ಮಾಡುತ್ತ ಒಂದು ದಿನ ಕೃತಾಹ್ನಿಕರಾಗಿ, ಹುತವಹನಲ್ಲಿ ಆಹುತಿಗಳನ್ನರ್ಪಿಸಿ, ಆ ನಮಯದಿ ಬಂದ ನೂತನ ನುತಹರಿ ಗುಣನಂಪೂತನ, ನಿತಾಂತ ಕರುಣೋಪೇತನನ್ನುಗ್ರಶ್ರವನನ್ನು ಕಂಡು ಯದೋಚಿತ ನತ್ಕಾರವನ್ನು ಮಾಡಿ, ಆದರದಿಂದ ಪ್ರಶ್ನೆಗಳಂ ಕೇಳಿದರು

ನೂತ! ಪಾಪರಹಿತ! ಪುರಾಣೇತಿಹಾನ ದರ್ಮಶಾನ್ತ್ರಗಳನ್ನು ಚೆನ್ನಾಗಿ ಅದ್ಯಯನ ಮಾಡಿ, ನಾರವನ್ನು ತಿಳಿದಿರುವಿ, ಶ್ರೀ ವೇದವ್ಯಾನನೇ ಮೊದಲಾದ ಮುನಿಮುಖ್ಯರ ಅನುಗ್ರಹದಿಂದ ಅವರು ಉಪದೇಶಿಸಿದ ಅರ್ಥಗಳನ್ನು ವ್ಯತ್ಯಾನವಿಲ್ಲದೆ ಯದಾರ್ಥ ವಾಗಿ ನರ್ವವನ್ನು ತಿಳಿದು ತಿಳಿನಲು ಅರ್ಹನಾಗಿರುವಿ ಪರಮ ರಹನ್ಯಾರ್ದವನ್ನಾದರೂ ಗುರುಗಳು ಪ್ರೇಮಪಾತ್ರರಾದ ಶಿಷ್ಯರಿಗೆ ತಿಳಿಸಿಕೊಡುವರಲ್ಲವೇ? ಜೀವರಿಗೆ ಸ್ಥಿರಕಲ್ಯಾಣ ನಾದನವಾಗಿ ನೀನು ವಿಚಾರಿಸಿದ ಶಾಸ್ತ್ರ ನಾರ್ದ ನಂಗ್ರಹವನ್ನೆಮಗೆ ನಿರೂಪಿಸು

ಈ ಕಲಿಯುಗದಲ್ಲಿ ಮರ್ತ್ಯರಲ್ಪಾಯುಷ್ಕರು, ಅಲನರು, ಮಂದಬುದ್ಧಿಗಳು, ಅಲ್ಪಪುಣ್ಯರು, ರಾಗರೋಗಪೀಡಿತರು, ಕಷ್ಟನಾಧ್ಯವಾದ ಕರ್ಮಾಚರಣ ತತ್ಪರರು, ಕೇಳಬೇಕು ಅನಂತಶಾನ್ತ್ರಗಳನ್ನು! ಉಳಿದಿರುವ ಆಯುಃಕಾಲವೋ, ಅನಿಶ್ಚಿತವು, ಅಲ್ಪವು ಪರಸ್ಪರ ವಿರುದ್ಧ ಶಾನ್ತ್ರಗಳಿಂದ ನಿಶ್ಚಯಜ್ಞಾನವು ದುರ್ಲಬವಾಗಿದೆ ಆದ್ದರಿಂದ ಶ್ರೀ ಹರಿಯು ಎಂತು ಅನುಗ್ರಹೋನ್ಮುಖನಾಗುವನೋ, ಎಂತು ಮನಃಶುದ್ಧಿ ಸಿಗುವದೋ ಅಂತಹ ನಾರಬೂತವಾದ ನರ್ವಬೂತಮಂಗಲಪ್ರದವಾದ ವಿಷಯವನ್ನು ನಿನ್ನ ನಿಶಿತ ಬುದ್ಧಿಯಿಂದ ನಿಶ್ಚಯಿಸಿ ಪೇಳು

ಪ್ರಿಯ ಸೂತ! ನಿನಗೆ ಮಂಗಲವಾಗಲಿ! ವಸುದೇವನಿಂದ ದೇವಕಿಯಲ್ಲಿ ಜನಿಸಿದ ಪಾರ್ಥಸಖನಾದ ಶ್ರೀಕೃಷ್ಣನವತರಿಸಿದ್ದೇತಕ್ಕೆ? ಮೂಲರೂಪಿಯಾದ ನಾರಾಯಣನ ಅವತಾರಗಳು ಸಜ್ಜನರ ಕ್ಷೇಮಾಬಿವೃದ್ಧಿಗಳಿಗಲ್ಲವೇ? ಘೋರ ಸಂಸಾರದಲ್ಲಿ ನರಳುವ ನರನು ವಿವಶನಾಗಿ ಅರ್ದಾಸುಸಂದಾನದಿಂದ, ಹರೇ! ಎಂದು ಉಚ್ಚರಿಸುವ ಮಾತ್ರದಿಂದ ಶೀಘ್ರವೇ ಮುಕ್ತನಾಗುವನು ಅಹಂಕಾರತತ್ವನಿಯಾಮಕನಾದ್ದರಿಂದ ಬಂಧಕನಾದ ಶಿವನೂ ಕೂಡ ಯಾವ ಸ್ವಾಮಿಯನ್ನು ಕಂಡು ದೂರ ಸರಿಯುವನೋ, ಬಾಗೀರಥಿಯಂತೆ ಬಾಗವತರೂ ಯಾವ ಪರಮಪುಣ್ಯ ಶ್ಲೋಕ ಶಿಖಾಮಣಿಯ ಪಾದವನ್ನಾಶ್ರಯಿಸಿರುವುದ ರಿಂದ ತಮ್ಮನ್ನು ಸೇವಿಪರ ಪಾಪರಾಶಿಯನ್ನು ನಾಶಗೈದು ದಿವ್ಯ ಜ್ಞಾನಕಾರಣರಾಗುವರೋ, ಅಂತಹ ಸ್ತೋತ್ರ ಪಾತ್ರ ಸಚ್ಚರಿತ್ರನಾದ ಬಗವಂತನ ಕಲಿಕಾಲ ಮಲಾಪಹರಣವಾದ, ಶ್ರವಣಬೂಷಣವಾದ ಹೃತ್ತೋಷಣವಾದ ಶ್ರೀಹರಿ ಕಲ್ಯಾಣಗುಣೋಪಚಿತ ಬಾಷಣ ಗಳನ್ನು ಯಾವ ಬಕ್ತನು ಕೇಳದಿರುವನು? ಯಾವ ಮನಃಶುದ್ಧಿಕಾಮನು ಕೇಳಿ ಸಂತೋಷ ಪಡದೆ ಇರುವನು?

ಬ್ರಹ್ಮಾದಿ ವಿಬುದಜನ ಪರಿಗೀತವಾದ ಆ ಬಗವಂತನ ಉದಾರಕರ್ಮಗಳನ್ನು ಕೇಳಲು ನಾವೆಲ್ಲರೂ ಉತ್ಸುಕರಾಗಿರುವೆವು ಅವನ ಅವತಾರಗಳಾವುವು? ಸ್ವೇಚ್ಛೆಯಿಂದ ಅವತರಿಸಿದ ಅವನ ಶುಬಗಾದೆಗಳನ್ನು ಗಾನ ಮಾಡು ಸೂತಾ! ಪದ ಪದದಲ್ಲಿಯೂ ಮದುರತರವಾದ ಉತ್ತಮ ಶ್ಲೋಕ ಚಕ್ರಪಾಣಿಯ ವಿಕ್ರಮಲೀಲೆಗಳನ್ನೆಷ್ಟು ಕೇಳಿದರೂ ನಮಗೆ ಸಾಕೆನಿಸಿಲ್ಲ 'ರಸೋ ವೈ ಸಃ' ಅಲ್ಲವೇ?

ಬಲರಾಮನಿಂದ ಕೂಡಿ ಬ್ರಹ್ಮೇಶಮುಖಸುರವಲ್ಲಬನಾದ ಶ್ರೀಕೃಷ್ಣನು ಮಾಡಿದ ಲೋಕೋತ್ತರ ಕಾರ್ಯಗಳನ್ನು ನಾವು ಶ್ರದ್ಧೆಯಿಂದ ಕೇಳಲಿಚ್ಛಿಸಿರುವೆವು ಪರಗೋವಿಂದ ಕಥಾಸುದಾರಸ ಮಹಾವರ್ಷೋೞರುಧಾರಾಪರಂಪರೆಯಿಂದಲ್ಲದೆ, ಸೂರಿಚಂದ್ರ! ಇತರೋ ಪಾಯಗಳಿಂದ ಪ್ರವಿಸ್ತರದುರ್ಧ್ವಾಂತದುರಂತ ದುಸ್ಸಹಜನುಸ್ಸಂಬಾವಿತಾನೇಕದುಸ್ತರ ಗಂಬೀರ ಕಠೋರಕಲ್ಮಷಕಸದ್ಭಾವಾಗ್ನಿಯು ಶಾಂತಿಸುವದೇ? ಮನುಜರ ಮಧ್ಯದಲ್ಲಿ ಮಾದವನು ತನ್ನ ಸ್ವರೂಪಾನಂದವನ್ನು ತೋರಗೊಡದೆ ಗೂಢನಾಗಿ ಸಾಮಾನ್ಯ ಮಾನವ ನಂತೆ ವರ್ತಿಸಿದನಂತೆ! ಈ ವೈಷ್ಣವ ಕ್ಷೇತ್ರದಲ್ಲಿ ಕಲಿಕಾಲವು ಬರುವದನ್ನರಿತು ದೀರ್ಘಸತ್ರ ವನ್ನು ಮಾಡುತ್ತಾ ವ್ಯಾಪಾರಾಂತರಗಳಂ ಬಿಟ್ಟು ಶ್ರೀಹರಿಕದಾಕಲಾಪವನ್ನು ಕೇಳುತ್ತಾ ಅದೇ ನಮ್ಮ ಜೀವಾತುವೆಂದರಿತಿರುವೆವು ದೈವಯೋಗದಿಂದ ಜಲರಾಶಿಯನ್ನು ದಾಟ ಲಿರುವ ಜನರಿಗೆ ಕರ್ಣಧಾರನಂತೆ ಕಲಿ ದೋಷಹರಣಪಾಂಟಾಕಲಿತರಾದ ನಾವು ನಿನ್ನನ್ನು ಪೊಂದಿ ದನ್ಯರಾಗರುವೆವು ಯೋಗೇಶನಾದ ಶ್ರೀಕೃಷ್ಣನು ತನ್ನ ಮೂಲರೂಪವನ್ನೈದಲು ಬಕ್ತಿಜ್ಞಾನಲಕ್ಷಣ ದರ್ಮವು ಯಾರಲ್ಲಿ ನೆಲೆಮಾಡಿ ನಿಂತಿದೆ? ಸೂತಾ! ಶ್ರೇಯಸ್ಸಾದನ ವಾವುದು? ಅಂತರ್ಯಾಮಿ ಪ್ರೀತಿಯು ಹೇಗಾಗುವದು? ಕೃಷ್ಣಾವತಾರಗಳಲ್ಲಿ ಹರಿಯ ಚರಿತೆಗಳಾವವು? ಅವನ ಯಶೋವರ್ಣನೆಯ ಮಹಿಮೆ ಏನು? ಅವತಾರಾಂತರಗಳ

ವಿವರಗಳೆಂತು? ದರ್ಮವೆಲ್ಲಿ ನಿಂತಿದೆ? ಎಂಬುವ ಈ ಆರು ಪ್ರಶ್ನೆಗಳಿಗೆ ಸಮಾದಾನವಂ ಹೇಳಿ ನಮ್ಮನ್ನು ಸಂತೋಷಗೊಳಿಸು" ಎಂದು ಶೌನಕನು ಕೇಳಿದನು

## ೨. ಸೂತಪ್ರತಿವಚನ–ಬಾಗವತಸಾರ

ನಿಖಿಲಪುರಾಣವ್ಯಾಖ್ಯಾನವೈಖರೀಸಮೇತನಾದ ಸೂತನಾಶೌನಕಾದಿ ಮುನಿಗಳ ವಚನವನ್ನು ಕೇಳಿ ಅವರನ್ನು ಪ್ರಶಂಸಿಸಿ, ದೇವತಾಗುರುವಂದನವನ್ನು ಮಾಡಲಿಚ್ಛಿಸಿ ಇಂತೆಂದನು

ಸರ್ವಸ್ವಪರಿತ್ಯಾಗವನ್ನು ಮಾಡಿ ಅವದೂತರಾಗಿ ಶ್ರೀಹರೀಚ್ಛೆಯಂತೆ ಪ್ರಯಾಣ ಮಾಡುವ, ದೇಹಾದ್ಯಬಿಮಾನರಹಿತರಾದ, ಏಕಾಕಿಗಳಾದ, ಕೃತಕೃತ್ಯರಾದ ಯಾವ ಶ್ರೀಶುಕಾಚಾರ್ಯನನ್ನು ನೋಡಿ ಪುತ್ರವಿಯೋಗ ಕಾತರರಂತೆ, ಅದೀರರಂತೆ ಶ್ರೀ ವ್ಯಾಸ ದೇವರು ಪುತ್ರಾ! ಎಂದು ಕೂಗಲು, ಅಹಂಕಾರಾತ್ಮಕ ರುದ್ರಾವತಾರನಾದ ಶುಕನ ವ್ಯಾಪ್ತಿಯಿಂದ ವೃಕ್ಷಗಳು ಕೂಡ ಪ್ರತಿದ್ವನಿಸಿದವೋ ಅಂತಹ ಸರ್ವಬೂತಹೃದಯ ಸ್ವಾಮಿಯಾದ ಶ್ರೀಶುಕಾಚಾರ್ಯನಿಗೆ ನಮಸ್ಕರಿಸುತ್ತೇನೆ ಅವನು ಅಂತರ್ಗುರು ಮಾತ್ರಸಲ್ಲದೇ ಜ್ಞಾನೋಪದೇಶಕನಾಗಿ ಬಹಿರ್ಗುರುವೂ ಆಗಿರುವುದರಿಂದ ಅವನಿಗೆ ಪುನಃ ನಮಸ್ಕಾರವು ಯಾವ ಶುಕನು ತನ್ನ ಮನಸ್ಸಿನಲ್ಲಿ ವೇದಸಾರವಾದ ಬಾ ಗವತವನ್ನು ವೇದವೇದ್ಯನಾದ ಹರಿಯನ್ನೂ ದರಿಸಿ ಅದ್ಯಾತ್ಮತತ್ತ್ವದೀಪವನ್ನು ಸಂಸಾರಮಹಾಂದಕಾರದಲ್ಲಿರುವ ಸಜ್ಜನ ಮುಮುಕ್ಷುಗಳಿಗೆ ತೋರಿ ಅವರನ್ನು ತಮಸ್ಸಿನಿಂದ ಪಾರು ಮಾಡಿದನೋ ಅಂತಹ ಕರುಣಾಪೂರ್ಣನಾದ ಬಾಗವತೋಪದೇಶಕನಾದ ಶ್ರೀಶುಕನಿಗೆ ನಮಸ್ಕಾರವು

ಶ್ರೀನಾರಾಯಣನಿಗೂ, ಶ್ರೀರಮಾದೇವಿಗೂ, ಜೀವೋತ್ತಮರಾದ ಬ್ರಹ್ಮವಾಯುಗಳಿಗೂ, ಬಾರತೀಸರಸ್ವತಿಯರಿಗೂ, ನರರೂಪನಾದ ಶೇಷದೇವರಿಗೂ ಬಾಗವತ ರಚನಾ ಸಮುಲ್ಲಾಸರಾದ ವೇದವ್ಯಾಸರಿಗೂ, ನಮಸ್ಕರಿಸಿ "ಜಯ" ಎಂದು ಖ್ಯಾತವಾದ ಶ್ರೀ ಬಾಗವತವನ್ನು ಅವರ ಕರುಣೆಯಿಂದ ಹೇಳುವೆನು

ಮುನಿಶ್ರೇಷ್ಠರೇ! ಮೋಕ್ಷರೂಪವಾದ ಪರಮಮಂಗಲವನ್ನು ಕುರಿತು ನೀವು ಕೇಳಿದ ಪ್ರಶ್ನೆಯು ಶ್ಲಾಘನೀಯವಾಗಿದೆ ಶ್ರೀಕೃಷ್ಣನ ಕದೆಯು ಮನಶ್ಶುದ್ದಿಗೆ ಕಾರಣವಾಗಿದೆ ಮನಶ್ಶುದ್ದಿಯಿಂದ ಜೀವನು ನಿಷ್ಕಲ್ಮಷನಾಗುತ್ತಾನೆ ಅಂತಹನಲ್ಲಿ ಶ್ರೀಹರಿಯು ಪ್ರಸನ್ನನಾಗುವನು ನಿರಂತರಾಯವೂ, ನಿಷ್ಕಾರಣವೂ ಆದ ಬಕ್ತಿಯನ್ನು ಪುಟ್ಟಿಸುವುದೇ ಪರಮ ಧರ್ಮವೆನಿಸುವದು ಬಕ್ತಿಯಿಂದಲೇ ಬಗವತ್ಪ್ರಸಾದವಾಗುವದು ವಾಸುದೇವನಲ್ಲಿ ಮಾಡಿದ ಬಕ್ತಿಯಿಂದ, ಶುಷ್ಕತರ್ಕದಿಂದ ಪುಟ್ಟಿದ ಅನ್ಯದಾಜ್ಞಾನವು ನಶಿಸಿ, ಯದಾರ್ದ ಜ್ಞಾನವು ಮತ್ತು ವಿಷಯಾಸಂಗರೂಪವಾದ ವೈರಾಗ್ಯವು ಪುಟ್ಟುವುದು ಶಾಸ್ತ್ರೋಕ್ತ ಸದಾಚಾರ, ದ್ರವ್ಯದೇಶಕಾಲಾದಿಗಳಿಂದ ಚೆನ್ನಾಗಿ ಅನುಷ್ಠಿತವಾದ ಸ್ವದರ್ಮವೂ ಕೂಡ ದೈತ್ಯಾರಿಯಾದ ವಿಷ್ಣುವಾದದಲ್ಲಿ ನಿರಂತರಾಬ್ಯಾಸರೂಪ ರತಿಯನ್ನು ಹುಟ್ಟಿಸದಿದ್ದ

ಅದು ಶ್ರಮವಲಕವೇ ನರಿ ದರ್ಮಕ್ಕೆ ಪಲವು ಮೋಕ್ಷವೇ, ಅರ್ದಕಾಮಗಳಲ್ಲ ಅರ್ದಕಾಮಗಳೂ ಮರಣ ಪರ್ಯಂತ, ಪಾರಲೌಕಿಕಗಳಲ್ಲ ಅದರಲ್ಲಿ ಅರ್ದವು ದರ್ಮಮಾತ್ರ ಪಲಕವಾಗಿದೆ ಆಗಲಿ, ಕಾಮವೇ ಅದರ ಪ್ರಯೋಜನವಲ್ಲ ಕಾಮದ ಲಾಬವು ಇಂದ್ರಿಯ ಪ್ರೀತಿಯಲ್ಲ ಎಷ್ಟು ಮಾತ್ರ ಅರ್ದಾದಿಗಳಿಂದ ಶರೀರಯಾತ್ರೆಯು ನಿರ್ವಹಿಸಲ್ಪಡುವದೋ ಅಷ್ಟೇ ನಂಪಾದನೀಯವು ಎಂದರಿತು ಅರ್ದಕಾಮಗಳಿಂದ ದರ್ಮವನ್ನೂ, ದರ್ಮದಿಂದ ವಿಷ್ಣುಕದಾರತಿಯನ್ನೂ, ಕದಾರತಿಯಿಂದ ಜ್ಞಾನ, ಬಕ್ತಿ, ವೈರಾಗ್ಯಗಳನ್ನೂ ನಂಪಾದಿಸುವುದೇ ಕರ್ತವ್ಯವಾಗಿದೆ ತತ್ತ್ವಜಿಜ್ಞಾನೆಯನ್ನು ಮಾಡದ ಜೀವಿತದಲ್ಲಿ ಜೀವನಿಗೆ ಕಥಾರತಿಯೇ ಹುಟ್ಟಲಾರದು ಬಗವತ್ತತ್ತ್ವವನ್ನರಿಯದ ಪುರುಷನು ಮಾಡಿದ ವಿವಿದ ಕರ್ಮಗಳಿಗೆ ಐಹಿಕಾಮುಷ್ಮಿಕ ಪಲಗಳೆರಡೂ ಇಲ್ಲ ಏಕೆಂದರೆ ಆ ಕರ್ಮಗಳನ್ನವನು ಬಗವಂತನಲ್ಲಿ ಅರ್ಪಿಸಿರುವುದಿಲ್ಲ ಬಗವಂತನ ಯದಾರ್ದ ಸ್ವರೂಪವು ತತ್ತ್ವವೆನಿಸುವುದು ಅವನು ನಮಾದಿಕ ರಹಿತನೂ ಜ್ಞಾನಸ್ವರೂಪನೂ ಆಗಿರುವನೆಂದು ಕಪಿಲಾದಿ ತತ್ತ್ವವೇದಿಗಳು ಪೇಳುವರು ಗುಣಪೂರ್ಣನು ದೇಶಕಾಲಾದಿಗಳಲ್ಲಿ ವ್ಯಾಪ್ತನಾದ್ದರಿಂದ ಬ್ರಹ್ಮನೆಂತಲೂ, ನರ್ವಾಂತರ್ಯಾಮಿಯಾದ್ದರಿಂದ ಪರಮಾತ್ಮನೆಂತಲೂ, ಐಶ್ವರ್ಯಾದಿ ಗುಣಗಳುಳ್ಳವನಾದ್ದರಿಂದ ಬಗವಂತನೆಂತಲೂ ಅವನನ್ನು ಕರೆಯುವರು ಕೇವಲಾನಂದಮಯನಾದ ಆ ಶ್ರೀಹರಿಯು ಕಾರ್ಯಕಾರಣರೂಪವಾದ ಜಗತ್ತಿಗೆ ಬಿನ್ನನಾಗಿರುವನು ಪ್ರಕೃತಿಯಲ್ಲಿಯು ಕಾರ್ಯಕಾರಣಗಳಲ್ಲಿಯು ನಿಯಾಮಕನಾಗಿದ್ದರೂ ಅವನಿಗೆ ಪ್ರಕೃತಿ ನಂಬಂದವಿಲ್ಲ ಅಂತಹನಲ್ಲಿ ಬಕ್ತಿಯನ್ನು ಮಾಡುವದರಿಂದ ಜೀವನು ಬಂದನರಾಹಿತ್ಯವನ್ನೈದುವನು ಆದ್ದರಿಂದ ಮುನಿಗಳೆ! ಹರಿಮಾಹಾತ್ಮ್ಯ ಶ್ರವಣದಿಂದ ಪುಟ್ಟಿದ, ಜ್ಞಾನ ವೈರಾಗ್ಯಗಳಿಂದ ಹೆಚ್ಚಾದ ಬಕ್ತಿಯಿಂದ ಮನನಶೀಲರಾದವರು ತಮ್ಮ ಮನಸ್ಸಿನಲ್ಲಿಯೇ ಆ ಪ್ರಬುವನ್ನು ಕಾಣುವರು

ಬ್ರಾಹ್ಮಣೋತ್ತಮರೇ! ವರ್ಣಾಶ್ರಮ ವಿಬಾಗದಿಂದ ಚೆನ್ನಾಗಿ ಮಾಡಲ್ಪಟ್ಟ ದರ್ಮಗಳಿಗೆ ಶ್ರೀಹರಿಪ್ರೀತಿಯೇ ಫಲವಾಗಿದೆ ಆದ್ದರಿಂದ ಒಂದೇ ಮನದಿಂದ ಬಗವಂತನ ಶ್ರವಣ ಮನನ ದ್ಯಾನಗಳನ್ನು ಅವನ ಪೂಜೆಯನ್ನು ನಿತ್ಯ ಮಾಡುವುದರಿಂದ ನಕಲ ಕುಕರ್ಮಪಲವೂ ನಷ್ಟವಾಗುವದು ಇಂತಹನ ಕದೆಯಲ್ಲಿ ಯಾವ ಜ್ಞಾನಿಯು ಶ್ರದ್ದೆವಹಿನಲಾರನು? ವೇದಾದಿಶ್ರದ್ದೆಯುಳ್ಳವನಿಗೆ ಬಗವತ್ಕದೆಯಲ್ಲಿ ಶ್ರದ್ದೆಯು, ಪುಣ್ಯತೀರ್ದಯಾತ್ರೆಯ ಕಾಲದಲ್ಲಿ ಶ್ರೀಹರೀಚ್ಚೆಯಿಂದ ಲಬಿಸುವ ಮಹಜ್ಜನರ ನೇವೆಯಿಂದಲೂ ಲಬಿಸುವದು ನಜ್ಜನರಿಗೆ ಅನಿಮಿತ್ತ ಬಂದುವಾದ ಗೋವಿಂದನು, ತನ್ನ ಮಹಿಮೆಯನ್ನು ಕೇಳುವವರ ಹೃದಯವನ್ನು ಪೊಕ್ಕು ಅವರ ನರ್ವಪಾಪಗಳನ್ನು ನಾಶಪಡಿಸುವನು ಪಾಪಗಳು ನಶಿಸಲು ಬಾಗವತರ ನೇವೆ ಹೆಚ್ಚಾಗಿ ಲಬಿಸುವದು ಬಾಗವತ ದರ್ಮದ ಮತ್ತು ಬಾಗವತರ ನೇವೆಯಿಂದ ಪುಣ್ಯಶ್ರವಣಕೀರ್ತನನಾದ ಉತ್ತಮಶ್ಲೋಕನಲ್ಲಿ ಅಚಂಚಲವಾದ ಬಕ್ತಿಯು ಪುಟ್ಟುವುದು ಬಕ್ತಿಯಿಂದ ರಜಸ್ಸು ತಮಸ್ಸುಗಳ ಕಾರ್ಯವಾದ ಕಾಮ-

ಲೋಭಾದಿ ಪ್ರಮಾದಗಳು ದೂರ ಸರಿಯಲು, ಮನಸ್ಸು ಸತ್ತ್ವದಲ್ಲಿ ಅಂದರ ಅದರ ಕಾರ್ಯವಾದ ಜ್ಞಾನದಲ್ಲಿ ಮಗ್ನವಾಗಿ ನಿರಂತರ ಹರಿಸ್ಮರಣಸಮರ್ಥವಾಗುವದು ಅದರಿಂದ ಹರಿಯು ಪ್ರಸನ್ನನಾಗುವನು ವಿಷಯಸ್ನೇಹವನ್ನು ದೂರವಾಗಿ ದೂಡಿದ ಭಕ್ತನಿಗೆ ಹರಿಪ್ರಸಾದದಿಂದ ಸ್ವಬಿಂಬ ಜ್ಞಾನವಾಗುವದು ಅಪರೋಕ್ಷಜ್ಞಾನವಾದಾಕ್ಷಣವೇ ಲಿಂಗದೇಹವು ದಗ್ಧೇಂಧನವಹ್ನಿಯಂತೆ ಸ್ವಕಾರ್ಯವಾದ ಜನನಮರಣರೂಪ ಸಂಸಾರ ದಾನದಲ್ಲಿ ಅಸಮರ್ಥವಾಗುವುದು ಈಶ್ವರಾದಿ ತತ್ತ್ವವಿಷಯಕ ಸರ್ವಸಂಶಯವು ನಿವಾರಿತವಾಗಿ ಸ್ವಯೋಗ್ಯಜ್ಞಾನವಾಗುವದು ಅದರಿಂದ ಪ್ರಾರಬ್ಧವೊಂದುಳಿದು ಸಂಚಿತಾ ಗಾಮಿ ಪಾಪಕರ್ಮಗಳ ಸರ್ವನಾಶವಾಗುವದು ಈ ವಿಷಯಗಳನ್ನರಿತು ಜ್ಞಾನಿಗಳು ಮುಕ್ತಾಮುಕ್ತರೂ ಸಹ ಬಗವಂತನಾದ ವಾಸುದೇವನಲ್ಲಿ ಬಹುಪ್ರೀತಿಯಿಂದ ಮನಃ ಪ್ರಸಾದ ಜನಕವೂ ಬಗವದನುಗ್ರಹಸಾದನವೂ ಆದ ಬಕ್ತಿಯಂ ಮಾಡುವರು ಅಮುಕ್ತರು ಮುಕ್ತಿಕಾಂತೆಯನ್ನು ಕೂಡುವರು

ಸತ್ತ್ವ, ರಜಸ್ಸು, ತಮಸ್ಸು ಇವು ಜಡ ಪ್ರಕೃತಿಯ ಗುಣಗಳು. ಅವುಗಳ ಲೇಪವಿಲ್ಲದೆ ಇರುವನಾದರೂ ಶ್ರೀಹರಿಯು ಮೂಲಪ್ರಕೃತಿಯಿಂದ ಸೃಷ್ಟಿಗೋಸುಗ ರಜಸ್ಸನ್ನು, ಪಾಲನೆಗಾಗಿ ಸತ್ತ್ವವನ್ನು, ಸಂಹಾರಕ್ಕಾಗಿ ತಮಸ್ಸನ್ನು ಸ್ವೀಕರಿಸುವನು ಆಗ ಶ್ರೀಹರಿಯು ಒಬ್ಬನೇ ಮೂರು ರೂಪಗಳನ್ನು ತಾಳಿ ಬ್ರಹ್ಮ, ವಿಷ್ಣು, ರುದ್ರ ಎನಿಸುವನು ರಮಾದೇವಿ ಯಾದರೂ ಪ್ರಕೃತಿನಿಯಾಮಕಳಾದ್ದರಿಂದ ಸತ್ತ್ವದಲ್ಲಿ ಶ್ರೀ, ರಜದಲ್ಲಿ ಭೂ, ತಮದಲ್ಲಿ ದುರ್ಗಾ ಎಂಬುವ ರೂಪತ್ರಯದಿಂದ ಕೂಡಿ ಶ್ರೀಹರಿಯಲ್ಲಿ ರಮಿಸಿ ಸೃಷ್ಟ್ಯಾದಿಗಳನ್ನು ಮಾಡಿ ಆ ಮಹಾಪ್ರಬುವಿಗೆ ತಾ ಮಾಡಿದ ಸೇವಾಫಲವನ್ನು ಅರ್ಪಿಸುವಳು

ಕಾಷ್ಟದಕಿಂತಲು ಮೇಘರೂಪವಾದ ದೂಮವು ಉತ್ತಮವು ದೂಮದಕಿಂತಲು ವೇದಪ್ರತಿಪಾದ್ಯನಾದ ಅಗ್ನಿಹೋತ್ರನು ಶ್ರೇಷ್ಠನು ಹಾಗೆಯೇ ಅದೋಗತಿ ಸಾದನವಾದ ತಮಸ್ಸಿಗಿಂತಲೂ ರಜಸ್ಸು, ಸ್ವರ್ಗಾದಿಲೋಕಸಾದನವಾದ ರಜಸ್ಸಿಗಿಂತಲೂ ಸತ್ತ್ವವು ಉತ್ತಮವೆನಿಸಿದೆ ಏಕೆಂದರೆ ಸತ್ತ್ವವು ಪರಬ್ರಹ್ಮದರ್ಶಕ ಜ್ಞಾನಸಾದನವಾಗಿದೆ ಹಾಗೆಯೇ ಸಾತ್ವಿಕರಾದ ಜೀವರೇ ಬ್ರಹ್ಮಜ್ಞಾನಾದಿಕಾರಿಗಳಾಗಿದ್ದಾರೆ ಆದ್ದರಿಂದ ಶಿಷ್ಟರಾದ ಮುನಿ ಗಳೂ ಬ್ರಹ್ಮಾದಿದೇವತೆಗಳೂ ಗುಣಗಳಲ್ಲಿ ಸತ್ತ್ವವನ್ನೇ ಅವಲಂಬಿಸಿ, ಅಪ್ರಾಕೃತ ಸತ್ತ್ವ ಸ್ವರೂಪನಾದ ಶ್ರೀಹರಿಯ ಲೋಕವನ್ನು ಪೊಂದಿದರು ಸಂಸಾರಿಗಳಲ್ಲಿ ರಜಸ್ತಮಃ ಪ್ರಕೃತಿ ಯವರಿಗೆ ಮೋಕ್ಷಾನಂದವಿಲ್ಲ ಆದ್ದರಿಂದ ಘೋರರೂಪರಾದ ಪಿತೃಬೂತ ಪ್ರಜೇಶರನ್ನು ಬಿಟ್ಟು, ಪರಿಪೂರ್ಣಸುಖಾತ್ಮಕವಾದ ನಾರಾಯಣನ ಅವತಾರರೂಪಗಳನ್ನೇ ಬಜಿಸುತ್ತಾ ಸಾತ್ವಿಕ ಜನರು ತಮ್ಮ ಶಿಷ್ಯರಿಗೂ ಹಾಗೆಯೇ ವಾಸುದೇವನೇ ಬಜನೀಯನೆಂದುಪ ದೇಶಿಸುವರು ಸಂಸಾರ ಮುಮುಕ್ಷುಗಳಾದ ಸುಜನರವರ ಉಪದೇಶವನ್ನು ಅಸೂಯೆ ಮೊದಲಾದ ದೋಷವಿಲ್ಲದವರಾಗಿ ಅನುಸರಿಸಿ ಮೋಕ್ಷವನ್ನೈದುವರು ಪ್ರಜಾಕಾಮರು ಐಶ್ವರ್ಯಕಾಮರು ಆದ ರಾಜಸರು ಮತ್ತು ತಾಮಸರು ಪಿತೃಬೂತ ಪ್ರಜೇಶರನ್ನೇ, ಹರಿಯನ್ನು ಮರೆತು ಬಜಿಸುವರು

ಸಕಲಶಾಸ್ತ್ರ ತಾತ್ಪರ್ಯವನ್ನು ಪರ್ಯಾಲೋಚಿಸಲು ಸಕಲರಿಂದ ಅವಶ್ಯ ಸೇವ್ಯ ನಾದವನು ಶ್ರೀ ನಾರಾಯಣನೇ–ಇದಕ್ಕೆ ಸಂಶಯವಿಲ್ಲ. ಏಕೆಂದರೆ ವೇದಾದಿಮಹಾ ತಾತ್ಪರ್ಯ ವಿಷಯನು ವಾಸುದೇವನು. ಅಗ್ನಿಷ್ಟೋಮಾದಿ ಯಜ್ಞಗಳವನ ಪ್ರೀತಿಗಾಗಿಯೇ ಅಷ್ಟಾಂಗಯೋಗವು, ಸಂಧ್ಯಾದಿ ಕರ್ಮಗಳು, ಕಾಮಕ್ಲೇಶಾದಿ ತಪಸ್ಸು, ಇಷ್ಟಾಪೂರ್ತಾದಿ ಧರ್ಮಗಳು ಶಾಸ್ತ್ರಜ್ಞಾನ ದಾನಾದಿಗಳೆಲ್ಲವೂ ವಾಸುದೇವನ ಸರ್ವೋತ್ತಮತ್ವವನ್ನರಿತು ಮಾಡಿದರೇನೇ ಸಮೀಚೀನವೆನಿಸುತ್ತವೆ ಇಲ್ಲದಿದ್ದರೆ ನಿಷ್ಫಲವಾಗುತ್ತವೆ ಸತ್ಯಲೋಕಾದಿ ಗಳೂ ಕೂಡ ಶ್ರೀಹರಿಯ ವೈಕುಂಠದಂತೆ ಪುನರಾವೃತ್ತಿರಹಿತಗಳಲ್ಲ ಆಗ ಶ್ರೀಹರಿಯೇ ಪ್ರಳಯಾವಸಾನದಲ್ಲಿ ತನ್ನ ಸ್ವೇಚ್ಛೆಯಿಂದ ಕಾರ್ಯಕಾರಣಾತ್ಮಕವಾದ ಪ್ರಕೃತಿಯಲ್ಲಿ ನಿಂತು ಆ ಪ್ರಕೃತಿಯ ಗುಣಗಳಾದ ಸತ್ತ್ವರಜಸ್ತಮೋಗುಣಗಳನ್ನು ಉಪಾದಾನಕಾರಣವಾಗಿ ಮಾಡಿಕೊಂಡು ಪ್ರಕೃತಿನಿಯಾಮಕಳಾದ ಲಕ್ಷ್ಮೀದೇವಿಯೂ ತಾನೂ ನಿಮಿತ್ತಕಾರಣರಾಗಿ ಈ ಜಗತ್ತನ್ನು ಸೃಷ್ಟಿಸಿದನು ಗುಣತ್ರಯಗಳ ಲೇಪವಿಲ್ಲದ ಸಮರ್ಥನಾದ ಶ್ರೀಹರಿಯು ಗುಣನಿರ್ಮಿತವಾದ ಭೌತಿಕ ದೇಹೇಂದ್ರಿಯಾದಿಗಳಲ್ಲಿ ಪ್ರವೇಶಿಸಿ, ಸಕಲ ಪ್ರೇರಕನಾಗಿ ದ್ದರೂ ವಿಜ್ಞಾನಾನಂದಮೂರ್ತಿಯಾಗಿಯೇ ಇರುವನು ಅಜ್ಞಾನಿಗಳು ದೇಹೇಂದ್ರಿಯಾದಿ ಸಂಬಂಧವುಳ್ಳವನಾದ್ದರಿಂದ ಆ ಪ್ರಭುವನ್ನೂ ಜೀವನೆಂದು ತಿಳಿಯುವರು ಅನೇಕ ವಿಧ ಕಾಷ್ಠಗಳಲ್ಲಿರುವ ವಹ್ನಿಯು ಒಬ್ಬನೇ ಆಗಿರುವಂತೆ ಪರಮಾತ್ಮನು ತಾನೊಬ್ಬನೇ (ನಿರ್ವಿಶೇಷನು) ಆಗಿದ್ದರೂ ಅನೇಕ ರೂಪದವನಂತೆ ತೋರುವನು ಪರಮಾತ್ಮನಲ್ಲಿ ಸ್ವಗತಭೇದವಿಲ್ಲ ಕಾಷ್ಠಗಳಲ್ಲಿದ್ದಂತೆ ಭೇದವು ಜೀವರಲ್ಲಿ ಪರಸ್ಪರವಾಗಿಯೂ ಸತ್ಯರೂಪ ವಾಗಿಯೂ ಇದೆ ದುರ್ಭಗ ಶರೀರ ಪ್ರವೇಶಾದಿಗಳಿಂದ ಆಗುವ ದುಃಖಾದಿಗಳು ಶ್ರೀಹರಿ ಗಿಲ್ಲ ಪಂಚಭೂತಗಳು ಶಬ್ದಾದಿ ತನ್ಮಾತ್ರಗಳು ದಶೇಂದ್ರಿಯಗಳು ಮನಸ್ಸು ಇವುಗಳನ್ನು ನಿರ್ಮಿಸಿ ಅವುಗಳಲ್ಲಿ ಪ್ರವೇಶಿಸಿ, ಪ್ರೇರಿಸಿ ಅಲ್ಲಿ ಆಗುವ ಆನಂದಾದಿಗಳನ್ನೇ ಸ್ವೀಕರಿಸುವವ ನಾಗಲಿ ದುಃಖಾದಿಗಳನ್ನಲ್ಲ ಇಂತು ಸತ್ವಗುಣವೃದ್ಧಿಯಿಂದ ಲೋಕಗಳನ್ನು ಪಾಲಿಸುತ್ತಾ ಪೂರ್ವಕರ್ಮವಶನಾಗಿ ಹುಟ್ಟುವ ಜೀವನಂತಲ್ಲದೆ ಲೋಕರಕ್ಷಣೆಗಾಗಿ ಸ್ವೇಚ್ಛೆಯಿಂದ ತಿರ್ಯಗ್ಯೋನಿಯಲ್ಲಿ ವರಾಹಾದಿರೂಪದಿಂದಲೂ, ನರರಲ್ಲಿ ರಾಮಕೃಷ್ಣಾದಿ ರೂಪ ದಿಂದಲೂ, ಸುರರಲ್ಲಿ ಮಹಿದಾಸಾದಿರೂಪದಿಂದಲೂ, ಬೇಕಾದಾಗ ಯೋನಿಯ ಅವಶ್ಯ ಕತೆಯಿಲ್ಲೆಂದು ಭಕ್ತರಿಗೆ ತೋರಿಸಲೋಸುಗ ಸ್ತಂಭಾದಿಗಳಿಂದ ನೃಸಿಂಹರೂಪದಿಂದಲೂ ಪ್ರಾದುರ್ಭವಿಸಿ ಸಜ್ಜನರಂ ಸಲಹುತ್ತಾನೆ

## ೩ ಶ್ರೀಹರಿಯ ಅವತಾರಗಳು

ಭಗವಂತನು ಆದಿಯಲ್ಲಿ ಲೋಕಸೃಷ್ಟಿಯನ್ನು ಮಾಡಲಿಚ್ಛಿಸಿ ಮಹದಾದಿ ತತ್ತ್ವ ಗಳಿಂದ ಷೋಡಶಕಲಾಸಹಿತವಾದ ಪುರುಷರೂಪವನ್ನು ಸ್ವೀಕರಿಸಿದನು ಪ್ರಲಯೋದಕ ದಲ್ಲಿ ಶ್ರೀಪರ್ಯಂಕದಲ್ಲಿ ಶ್ರೀಭುಜಾಂತರ್ಗತನಾಗಿ ತನ್ನನ್ನು ಗೂಢನಾಗಿಸುವ ತಮಸ್ಸಿ ನಲ್ಲಿದ್ದ ಪರಮ ಪುರುಷನು ಪುನಃ ಉತ್ಪತ್ತಿಕಾಲದಲ್ಲಿ ಸ್ವಗೂಹಕತಮಃಪಾನವನ್ನು ಮಾಡಿ ತನ್ನನ್ನು ತಾನೇ ಪ್ರಕಾಶಗೊಳಿಸಿದನು ಯೋಗನಿದ್ರೆಯನ್ನು ಮಾಡುತ್ತಿದ್ದ ಆ ಪರಮ

ಪುರುಷನ ನಾಭಿಸರೋವರಜಾತಕಮಲದಿಂದ ದಕ್ಷಾದಿಪ್ರಜೇಶರ ಒಡೆಯನಾದ ಬ್ರಹ್ಮನು ಪಾದ್ಮಕಲ್ಪದಲ್ಲಿ ಜನಿಸಿದಾಗ ಸ್ವಾಮಿಯು ಪದ್ಮನಾಭನೆನಿಸಿದನು ಅದೇ ಹರಿಯು ಪುರುಷನೆನಿಸಿ ಬ್ರಹ್ಮಾಂಡದಲ್ಲಿ ವ್ಯಾಪ್ತವಾದ ತನ್ನ ಅವಯವವಿನ್ಯಾಸಗಳಿಂದ ಹದಿನಾಲ್ಕು ಲೋಕಗಳನ್ನು ರಚಿಸಿದನು

ಮೂಲರೂಪೀ ನಾರಾಯಣ, ಪದ್ಮನಾಭ, ಪುರುಷರೂಪತ್ರಯವು ನಿರ್ದೋಷ ವಾದುದು. ಸಕಲ ಕಲ್ಯಾಣಗುಣ ಪೂರ್ಣವಾದುದು ಮಹಾಜ್ಞಾನಿಗಳಾದ ಬ್ರಹ್ಮಾದಿಗಳು ಅನಂತವಾದಕರೋರುಭುಜಾನನಾದ್ಭುತವಾದ ಅನಂತಶ್ರವಣನೇತ್ರನಾಸಿಕಾ ಸಮೇತವಾದ ಕಿರೀಟ ಕಟಕ ಕುಂಡಲ ಹಾರಾದಿ ಭೂಷಿತವಾದ ಈ ಪುರುಷರೂಪವನ್ನು ಕಂಡು ಸ್ತುತಿಪರು ಈ ಸ್ವಾಮಿಯ ಸಾಮರ್ಥ್ಯೈಕ ದೇಶದಿಂದಲೇ ಸರ್ವ ಚರಾಚರ ಸೃಷ್ಟಿಯು ಆಗುವುದು ಅನೇಕ ಅವತಾರ ರೂಪಗಳು ಇವನಿಂದ ಹೊರಬರುತ್ತಾ ಮತ್ತೆ ಅವನಲ್ಲೇ ಏಕೀಭಾವ ವನ್ನು ಹೊಂದುತ್ತವೆ ಅವನಿಗೂ ಅವನ ಅವತಾರಗಳಿಗೂ ಯಾವ ವಿಧವಾದ ಭೇದವೂ ಇಲ್ಲ.

ಆ ದೇವನು ಪ್ರಥಮದಲ್ಲಿ ತನ್ನಿಂದ ತಾನೇ ಸನತ್ಕುಮಾರನೆಂಬ ರೂಪದಿಂದ ಜನಿಸಿ ಬ್ರಹ್ಮದೇವನಿಗೆ ವೇದವನ್ನುಪದೇಶಿಸಿದನು. ಬ್ರಹ್ಮಚರ್ಯವ್ರತವನ್ನು ವಿಶಿಷ್ಟಜನ ಶಿಕ್ಷೆಗಾಗಿ ಲೋಕದಲ್ಲಿ ನಡೆಸಿ ನೋಡಿಸಿದನು ಇವನೇ ಒಂದಂಶದಿಂದ ಬ್ರಹ್ಮಮಾನಸ ಪುತ್ರರಾದ ಸನತ್ಕುಮಾರರಲ್ಲಿದ್ದು ಅವರ ಖ್ಯಾತಿಗೆ ಕಾರಣನಾಗಿರುವನು. ದ್ವಿತೀಯಾವತಾರ ದಲ್ಲಿ ರಸಾತಲಗತಳಾದ ಮಹೀಮಂಡಲವನ್ನುದ್ಧರಿಸಲು ಆದಿವರಾಹನಾಗಿ ಹಿರಣ್ಯಾಕ್ಷನಂ ಕೊಂದು ದೇವ ಸುಜನರ ಸಲಹಿದನು ತೃತೀಯಾವತಾರವು ಮಹಿದಾಸರೂಪವಾಗಿದೆ ದೇವರ್ಷಿಯೆನಿಸಿ ಇತರಾದೇವಿಯ ಮಗನಾದ ಮಹಿದಾಸನು ಪಾಂಚರಾತ್ರಾಗಮನವನ್ನು ರಚಿಸಿದನು ಕರ್ಮಗಳಿಗೂ ಮೋಕ್ಷಸಾಧನತ್ವವು ಹೇಗೆ ಎಂದು ನಿರೂಪಿಸಿದನು ಧರ್ಮ ಪ್ರಜೇಶನಲ್ಲಿ ಮೂರ್ತೀದೇವಿಯಿಂದ ನಾಲ್ಕು ರೂಪದಿಂದ ಜನಿಸಿದನು ನರನೆಂಬುವ ಶೇಷನಲ್ಲಿ ನರನೆಂಬ ತನ್ನ ಶುಕ್ಲಕೇಶ ರೂಪದಿಂದಾವೇಶಿಸಿದನು ನಾರಾಯಣ, ಹರಿ, ಕೃಷ್ಣ ಎನ್ನುವ ಮೂರು ರೂಪಗಳು, ತಾನಾಗಿಯೇ ಪೂರ್ಣನಾಗಿಯೇ ಇರುವನು ನರನಾರಾಯಣರೆಂಬ ಈರ್ವರು ಋಷಿರೂಪರಾಗಿ ಬದರಿಕಾಶ್ರಮದಲ್ಲಿ ಭರತಖಂಡದ ಸುಜನಕ್ಷೇಮಾರ್ಥವಾಗಿ ತಪಸ್ಸಾಚರಿಸುತ್ತಿರುವರು ಐದನೇ ಅವತಾರವು ಕಪಿಲಾವತಾರವು. ಕಾಲಬಲದಿಂದ ನಷ್ಟವಾದ ಯಥಾರ್ಥಜ್ಞಾನಜನಕವಾದ ಸಾಂಖ್ಯತತ್ವವನ್ನು ಆಸುರಿ ಎಂಬ ಶಿಷ್ಯನನ್ನುದ್ದೇಶಿಸಿ ಪೇಳಿ ಉದ್ಧರಿಸಿದನು ಅತ್ರಿ ಋಷಿಗೆ ಅನಸೂಯೆಯಲ್ಲಿ ಜನಿಸಿ ತನ್ನನ್ನು ತಾನೇ ಪುತ್ರನಾಗಿ ಕೊಟ್ಟನಾದ್ದರಿಂದ ದತ್ತನೆನಿಸಿದ ಆರನೇ ಅವತಾರದಲ್ಲಿ ಶ್ರೀಶನು ಅಲರ್ಕನಿಗೂ ಪ್ರಹ್ಲಾದ ಯದುಹೈಹಯಾದಿಗಳಿಗೂ ಪರಾವರ ತತ್ತ್ವವಿದ್ಯೆಯನ್ನುಪದೇಶಿಸಿ ದನು ಸ್ವಾಯಂಭುವ ಮನ್ವಂತರದಲ್ಲಿ ರುಚಿಪ್ರಜೇಶನಿಂದ ಆಕೂತಿಯಲ್ಲಿ ಜನಿಸಿದ ಯಜ್ಞನು ಇಂದ್ರನಾಗಿ ಸುರರಾಜ್ಯವನ್ನಾಳಿದನಲ್ಲದೇ ಮನುರಾಜನನ್ನು ರಾಕ್ಷಸರಿಂದ ರಕ್ಷಿಸಿದನು ಯಜ್ಞಾವತಾರವು ಏಳನೆಯದಾಗಿದೆ ಎಂಟನೇ ಅವತಾರದಲ್ಲಿ ಮೇರುದೇವಿ

ಯಲ್ಲಿ ನಾಬಿರಾಜನಿಂದ ಋಷಬನೆನಿಸಿ ಜನಿಸಿ ಸರ್ವಾಶ್ರಮ ನಮಸ್ಕೃತವಾದ ಅವದೂತ ಪದ್ದತಿಯನ್ನು ದೀರರಿಗಾಗಿ ನೋಡಿಸಿಕೊಟ್ಟನು ಋಷಿಗಳ ಕೋರಿಕೆಯಂತೆ ಪೃದು ರಾಜನಲ್ಲಿ ಪೃದು ಎಂಬ ತನ್ನ ಒಂಬತ್ತನೇ ರೂಪದಿಂದ ನೆಲಸಿ ಪೃಥಿವಿಯನ್ನು ಗೋವನ್ನಾಗಿಸಿ ಆಕೆಯಿಂದ ಎಲ್ಲಾ ಓಷದಿಗಳಂ ಪಡೆದು ಜನರ ಜೀವನವನ್ನು ಕಲ್ಪಿಸಿ ಸತ್ಯಕಾಮರಲ್ಲಿ ಶ್ರೇಷ್ಠನೆನಿಸಿದನು ಚಾಕ್ಷುಷ ಮನ್ವಂತರದ ಪ್ರಳಯದಲ್ಲಿ ಸ್ವಚ್ಚನಾದ ಮತ್ಸ್ಯನಾಗಿ ವೈವಸ್ವತಮನುವನ್ನು ಬೂರೂಪ ನೌಕೆಯಲ್ಲಿ ಕ್ಷೇಮದಿಂದಿರಿಸಿ ರಕ್ಷಿಸಿದ ಈ ಅವತಾರವು ಹತ್ತನೆಯದು ಏಕಾದಶಾವತಾರದಲ್ಲಿ ಕೂರ್ಮನಾಗಿ ಮಂದರಾಚಲವನ್ನು ದರಿಸಿದನು ದ್ವಾದಶದಲ್ಲಿ ದನ್ವಂತರಿಯಾಗಿ ಸುದೆಯನ್ನು ತಂದುಕೊಟ್ಟರೆ ತ್ರಯೋದಶ ವಾದ ಮೋಹಿನೀರೂಪದಿಂದ ಅಮೃತವನ್ನು ಸುರರಿಗೆ ಮಾತ್ರ ಹಂಚಿ ಅಸುರರನ್ನು ವಂಚಿಸಿದನು ಬಯಂಕರನಾದ ದೈತ್ಯೇಂದ್ರನನ್ನು ಅತಿಸುಲಬವಾಗಿ, ಚಾಪೆ ಮಾಡುವವನು ಬಿದಿರನ್ನು ಸೀಳುವಂತೆ ಸೀಳಿ ತರಳನಾದ ಪ್ರಹ್ಲಾದನನ್ನು ಸಲಹಿದ ನೃಸಿಂಹನು ಚತುರ್ದಶಾವತಾರವಾಗಿದೆ ಹದಿನೈದನೇ ಅವತಾರದಲ್ಲಿ ವಾಮನ ರೂಪದಿಂದ ಕೂಡಿ ಬಲಿಯಂ ಬೇಡಿ ಪದತ್ರಯನೆಪದಿಂದ ಕಸಿದ ತ್ರೈಲೋಕ್ಯರಾಜ್ಯವನ್ನು ಇಂದ್ರನಿಗೆ ಸಂಪಾದಿಸಿ ಕೊಟ್ಟನು. ಬ್ರಹ್ಮದ್ರೋಹಿಗಳಾದ ರಾಜರನ್ನು ಇಪ್ಪತ್ತೊಂದು ಸಲ ದಂಡಯಾತ್ರೆಯಂ ಗೈದು ಸಂಹರಿಸಿ ಶಾಂತನಾದ ಪರಶುರಾಮನು ಹದಿನಾರನೆಯ ಅವತಾರವು ಸತ್ಯವತೀದೇವಿ ಯಲ್ಲಿ ಪರಾಶರರಿಂದ ಪ್ರಾದುರ್ಬವಿಸಿ, ಅಲ್ಪಮತಿಗಳಾದ ಮನುಜರ ಜ್ಞಾನರಕ್ಷಣೆಗೆಂದು ವೇದವಿಬಾಗವಂ ಮಾಡಿ ಪುರಾಣಗಳನ್ನು ರಚಿಸಿದನು ಸುರಕಾರ್ಯನಿರ್ವಹಣೆಗೆಂದು ನರದೇವನಾಗಿ, ಸಾಗರನಿಗ್ರಹ ರಾವಣವದ ಮೊದಲಾದ ಲೋಕೋತ್ತರ ಕಾರ್ಯಗಳಂ ಮಾಡಿದ ಶ್ರೀ ರಾಮಾವತಾರವು ಹದಿನೆಂಟನೆಯದು ಹತ್ತೊಂಬತ್ತು ಇಪ್ಪತ್ತನೆಯ ಅವತಾರಗಳಾದ ರಾಮ-ಕೃಷ್ಣ ರೂಪಗಳನ್ನು ವೃಷ್ಣಿಕುಲದಲ್ಲಿ ಬೂಭಾರವನ್ನಿಳುಹಲು ಅಸುರಮರ್ದನನು ದರಿಸಿದನು ಬಲರಾಮನು-ಶೇಷನು ಅವನಲ್ಲಿ ರಾಮನೆಂಬ ಶುಕ್ಲಕೇಶಾವೇಶದಿಂದ ಶ್ರೀಹರಿಯು ನೆಲಸಿದನು ಅನಂತರದಲ್ಲಿ ಕಲಿಯುಗದ ಸಂದ್ಯಾಕಾಲ ದಲ್ಲಿ ತ್ರಿಪುರವಾಸಿ ಅಸುರರನ್ನು ಮೋಹಪಡಿಸಿ ದರ್ಮದೂರರಂ ಮಾಡಲು ಗಯಾ ಪ್ರಾಂತದ ಕೀಕಟ ದೇಶದಲ್ಲಿ ಜಿನಸುತನೆಂದೆನಿಸಿ ಬುದ್ದನು ಅವತರಿಸಿ ಬೌದ್ದಮತವೆಂಬ ಪಾಷಂಡ ದರ್ಮವನ್ನುಪದೇಶಿಸಿದನು. ಬೌದ್ಧಾವತಾರವು ಇಪ್ಪತ್ತೊಂದನೆಯದು ಇಪ್ಪತ್ತೆ ರಡನೆಯ ಸಲ ಶ್ರೀ ಕಲ್ಕಿಯೆನಿಸಿ ಜಗತ್ಪತಿಯಾದ ಪದ್ಮನಾಬಮೂರ್ತಿಯು ಕಲಿಯುಗದ ಅಂತ್ಯ ಸಂದ್ಯಾಕಾಲದಲ್ಲಿ ರಾಜ್ಯಪಾಲಕರೆನಿಪರು ದಸ್ಯುಪ್ರಾಯರಾಗಿ ಪ್ರಜೆಗಳ ಪ್ರಾಣ ಮಾನ ವಿತ್ತಾಪಹಾರಕರಾಗಿ ಲೋಕಕಂಟಕರಾಗುತ್ತಿರಲು ಅವತರಿಸಿ ಬೂಬಾರವನ್ನು ಪರಿಹರಿಸಿ ದರ್ಮವನ್ನು ಸ್ಥಾಪಿಸುವನು

ಬಲಜ್ಞಾನಸ್ವರೂಪನಾದ ಶ್ರೀಹರಿಯ ಅವತಾರಗಳನಂತಗಳು ಹೇ ವಿಪ್ರೋ ತ್ತಮರೇ! ಅವುಗಳನ್ನು ಸಾಕಲ್ಯೇನ ವರ್ಣಿಸಲು ಸಾದ್ಯವೇ ಅಲ್ಲ ಜಲಪಾತದಲ್ಲಿ ಜಲದ ಶೀಕರಗಳನ್ನೆಣಿಸಲಹುದಾಗಲಿ ಶ್ರೀಹರಿಯ ಗುಣಾವತಾರಂಗಳನ್ನು ವರ್ಣಿಸಿ ಮುಗಿಸಲು

ಶ್ರೀ ಬ್ರಹ್ಮಾದಿಗಳಿಗೂ ಸಾಧ್ಯವಲ್ಲ. ಋಷಿಗಳು ಮನುಗಳು ದೇವತೆಗಳು ಮನುಪುತ್ರರು ಪ್ರಜಾಪತಿಗಳೆಲ್ಲರೂ ಹರಿಯ ಬಿನ್ನಾಂಶರು, ತದದೀನರು, ತತ್ಸದೃಶರು. ಮೇಲೆ ಹೇಳಿದ ಇಪ್ಪತ್ತೆರಡು ಅವತಾರ ರೂಪಗಳು ಸಾಕ್ಷಾತ್ ಕೃಷ್ಣನೇ ಸರಿ. ಇವುಗಳಿಗೆ ಪರಸ್ಪರ ಬೇದವಾಗಲಿ ಬೇದಾಭೇದವಾಗಲಿ ಎಳ್ಳಷ್ಟೂ ಇರುವುದಿಲ್ಲ. ಮೂಲರೂಪೀ ನಾರಾಯಣನೇ ಇಂದ್ರಶತ್ರುಪೀಡಿತವಾದ ಲೋಕವನ್ನು ರಕ್ಷಿಸಲು ಯುಗಯುಗದಲ್ಲಿ ತನ್ನಿಚ್ಛೆಯಿಂದ ಅವತರಿಸುವನು. ಜಿತೇಂದ್ರಿಯನಾಗಿ ಯಾವ ನರನು ರಹಸ್ಯವಾದ ಈ ಅವತಾರ ಚರಿತವನ್ನು ಉಬಯಸಂಧ್ಯಾಕಾಲಗಳಲ್ಲಿ ಬಕ್ತಿಯಿಂದ ಪಠಿಸುವನೋ ಅವನು ಸಾಂಸಾರಿಕ ದುಃಖಗಳಿಂದ ಮುಕ್ತನಾಗುವನು. ಸಕಲ ಕಲ್ಯಾಣಗುಣ ನಿದಾನನಾದ ಮಾದವನ ಸ್ಥೂಲ ರೂಪವೇ ಈ ಬ್ರಹ್ಮಾಂಡವು. ಪ್ರತಿಮೆಯಂತೆ ಅವನಿಂದ ವ್ಯಾಪ್ತವಾಗಿ ನಡೆಸಲ್ಪಡುತ್ತದೆ. ಮಹದಾದಿ ತತ್ತ್ವರಚಿತವಾದ ಇದನ್ನು ಕಂಡು ಅಜ್ಞಾನಿಗಳು ಪ್ರತಿಮೆಯಂ ಕಂಡು ದೇವರೆಂಬುವ ಅಜ್ಞರಂತೆಯೇ ಈ ಬ್ರಹ್ಮಾಂಡವಾಗಿ ಪರಿಣಮಿಸಿರುವನೆಂದು ವಾದಿಸುವರು. ಸರ್ವಜ್ಞನನ್ನು ಜಡವೆನ್ನುವ ಈ ಜಡರನ್ನು ನೋಡಿದಾಗ ಮೇಘಮಾಲೆಯಂ ಕಂಡು ಆಕಾಶವೆನ್ನುವ ಅದವಾ ಪಾರ್ಥಿವಧೂಳಿಯಂ ಕಂಡು ವಾಯುವೆನ್ನುವ ಬಾಲಬುದ್ಧಿಗಳ ನೆನಪಾಗುವುದಲ್ಲವೇ?

ಈಗ ಶೌನಕಾ! ಜೀವಸ್ವರೂಪವನ್ನು ಹೇಳುವೆನು, ಕೇಳು.

ಜೀವನು ಅನಾದಿ ಕಾಲದಿಂದ ಸಾತ್ತ್ವಿಕನೋ ರಾಜಸನೋ ಅದವಾ ತಾಮಸನೋ ಆಗಿರುವನು. ಈ ಸ್ವಬಾವವು ಎಂದಿಗೂ ನಾಶವಾಗದು, ಬದಲಾಗದು. ಮೇಲ್ಕಂಡ ಜಡ ಪ್ರಪಂಚದಿಂದಲೂ ಈಶನಿಂದಲೂ ಜೀವನು ಬಿನ್ನನಾಗಿರುವನು. ಪರಮಾತ್ಮನನ್ನು ಶ್ರವಣ ಮನನಾದಿಗಳಿಂದ ತಿಳಿಯದೆ, ಉಪಾಸನೆ ಮಾಡದೆಯಿರುವುದರಿಂದ ಪರಮಾತ್ಮನಾದ ಶ್ರೀಹರಿಯ ಜ್ಞಾನವಿಲ್ಲದೆ, ತಾನು ಯಾರು, ತನ್ನ ಗುಣಗಳೇನೆನ್ನುವ ಸ್ವಸ್ವರೂಪ ಜ್ಞಾನವೂ ಇಲ್ಲದೇ ಇರುವನು. ಮತ್ತೆ ಮತ್ತೆ ಜನನ ಮರಣಂಗಳನ್ನು ಅನುಬವಿಸುತ್ತಿರುವನು, ಸದಾ ಉಪಾಧೀಶನು.

ಶ್ರೀಹರಿಪ್ರಸಾದದಿಂದ ಬಂದಕಶಕ್ತಿನಿರ್ಮಿತವಾದ ಅಜ್ಞಾನವು ನಶಿಸುವದು. ಆ ಪ್ರಬುವಿನ ಪ್ರಕಾಶಮಾನವಾದ ಅಜ್ಞಾನನಾಶಕವಾದ ಇಚ್ಛೆಯು ಪ್ರಾದುರ್ಬೂತವಾಗುತ್ತಲೇ ತದನುಗ್ರಹಪಾತ್ರನಾದ ಜೀವನು ಮುಕ್ತನಾಗುವನು. ಶ್ರೀಹರೀಚ್ಛೆ ಹೊರತು ಮುಕ್ತಿದಾನದಲ್ಲಿ ಸ್ವತಂತ್ರ ಕಾರಣವಿನ್ನೊಂದಿಲ್ಲ. ಮುಕ್ತಜೀವನು ಸ್ವರೂಪಜ್ಞಾನಾನಂದಾದಿಗಳನ್ನು ಸ್ವಯೋಗ್ಯತಾನುಸಾರವಾಗಿ ಪಡೆದು ವೈಕುಂಠಾದಿ ಲೋಕಗಳಲ್ಲಿ ಸ್ವಾಪರರಿಂದ ಪೂಜಿತನಾಗಿರುತ್ತಾನೆ. ಇಂತು ಪ್ರಕೃತಿನಿರ್ಮಿತ ಸ್ಥೂಲ ಸೂಕ್ಷ್ಮ ಶರೀರಗಳು ಪರಮಾತ್ಮನಿಗೆ ಸರ್ವಜ್ಞನಾದ್ದರಿಂದ ಇಲ್ಲವೇ ಇಲ್ಲ. ಅವನ ಇಚ್ಛೆಯಿಂದ ಈ ಬಂದವು ಅಜ್ಞಾನಿಯಾದ ಜೀವನಿಗೆ ಬಂದಿದೆ. ಅವನ ಇಚ್ಛೆಯಿಂದ ಬಂದ ನಿವೃತ್ತಿಯೂ ಆಗುವುದೆಂಬ ತಿಳುವಳಿಕೆಗೆ ಬ್ರಹ್ಮಜ್ಞಾನವೆನ್ನುವರು. ಇಂತಹ ಜ್ಞಾನವೇ ಸಂಸಾರನಿವರ್ತಕವಾಗಿದೆ.

ಜನ್ಮರಹಿತನಾದ ಸ್ವಾಮಿಯ ಅವತಾರಗಳನ್ನು ಕರ್ಮವಲ ಬದ್ದನಾಗದ ಸರ್ವೇಶ್ವರನ ಪಾವನ ಚರಿತೆಗಳನ್ನು ಬ್ರಹ್ಮಾದಿ ಕವಿಜನರು ಅರಿತು ವರ್ಣಿಸುವರು ಈ ಮನಃಪ್ರೇರಕನ ಮಹಾಮಹಿಮೆಯನ್ನು ಬ್ರಾಂತರೆಂತು ಬಲ್ಲರು?

ಸತ್ಯಸಂಕಲ್ಪನು, ಕ್ರೀಡಾರತನು ಆದ ರಮಾರಮಣನೀಲೋಕವನ್ನು ಸೃಷ್ಟಿಸಿ ಜೀವ-ಶರೀರಗಳಲ್ಲಿ ಪ್ರೇರಕನಾಗಿದ್ದು ಅನನ್ಯಾದೀನನಾದ್ದರಿಂದ ಜೀವರ ಬೋಗಸಮಯದಲ್ಲಿ ಆನಂದವನ್ನೇ ಸ್ವೀಕರಿಸುವನು, ದುಃಖಗಳನ್ನಲ್ಲ. ಸೃಷ್ಟಿ ಸ್ತಿತಿ ಸಂಹಾರಗಳಿಂದವನಿಗೇನೂ ಪ್ರಯೋಜನವಿಲ್ಲದಿದ್ದರೂ ಕರುಣಾಕರನಾದ್ದರಿಂದ ಜೀವರಿಗಾಗುವ ಮುಕ್ತಿಪ್ರಾಪ್ತಿರೂಪ ಪ್ರಯೋಜನವನ್ನು ತನ್ನದಂತೆ ಅರಿತು ವಿಷಯಸಾರಪಂಗೊಳ್ಳುವ ಹೃಷೀಕೇಶನಿಗೆ ಪಲಾಸಕ್ತಿಯೂ ಇಲ್ಲ, ಕರ್ಮಬಂದವೂ ಇಲ್ಲ ನಾಟಕದಲ್ಲಿ ನಟಿಸುವ ನಟನ ಸ್ವರೂಪಾದಿಗಳನ್ನು ಅಜ್ಞನು ಹೇಗೆ ತಿಳಿಯಲಾರನೋ ಅಂತೆಯೇ ಕೃಮಿಸದೃಶನಾದ ಈ ಪಾಮರ ಮನುಜನು ಆ ವನಜಾಕ್ಷನ ಅನಂತ ಮಹಿಮೆಯನ್ನು ಅರಿಯಲಾರನು ಅವನ ನಾಮ ರೂಪಗಳನ್ನೂ ಎಣಿಸಿ ಮುಗಿಸಲಾರನು ದುರಂತ ವೀರ್ಯನಾದ ರದಾಂಗಪಾಣಿಯನ್ನು ಹೃತ್ಕಮಲ ಮದ್ಯದಿ ನಿರಂತರ ಧ್ಯಾನವಂ ಮಾಡಿ ಕಾಪಟ್ಯಾದಿ ದೋಷಗಳಂ ಬಿಟ್ಟು ಸಂತತ ಸರಸಿಜಾಕ್ಷಪಾದಸರೋಜ ಗಂದವನ್ನು ಸೇವಿಪ ಸಜ್ಜನನು ಮಾತ್ರ ಅವನ ಮಹಿಮೆಯಂ ಯದಾಯೋಗ್ಯಮಾಗಿ ಯಥಾರ್ದಮಾಗಿ ತಿಳಿದಾನು!

ಅಹೋ! ಋಷಿವರ್ಯರೇ! ನೀವೇ ದನ್ಯರು, ಏಕೆಂದರೆ ನಿರಪೇಕ್ಷರಾಗಿ ಅಖಿಲ ಲೋಕನಾದನು ಸರ್ವಾಂತರ್ಯಾಮಿಯು ಆದ ವಾಸುದೇವನಲ್ಲಿ ನಿಷ್ಕಲ್ಮಷವಾದ ಬಕ್ತಿಯನ್ನು ಪೊಂದಿರುವಿರಿ ಹರಿಯೇ ಸ್ವಾಮಿಯೆಂದು ಬಾವಿಸಿರುವಿರಿ ಇಂತಹ ಬಕ್ತರಿಗೆ ಜನನ ಮರಣ ರೂಪ ಸಂಸಾರದಿಂದ ನಿವೃತ್ತಿಯು ನಿಶ್ಚಯವು ವೇದಸಾರವಾದ ಬಾಗವತ ವೆಂದು ಖ್ಯಾತವಾದ ಉತ್ತಮಶ್ಲೋಕನ ಪಾವನ ಚರಿತೆಯನ್ನು ಬಗವಂತನಾದ ಬಾದ ರಾಯಣನು ಎಲ್ಲ ಲೋಕಗಳ ಜ್ಞಾನ ರೂಪ ಶ್ರೇಯಸ್ಸಿಗೂ ಪುಷ್ಟಿಗೂ ಮಂಗಳಕ್ಕಾಗಿಯೂ ರಚಿಸಿದನು ಈ ಪುರಾಣರಾಜವು ಶಬ್ದದಿಂದ ಮಾತ್ರವಲ್ಲದೇ ಅರ್ದದಿಂದಲೂ ದೊಡ್ಡ ದಾಗಿದೆ ಇದನ್ನು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಶುಕಾಚಾರ್ಯರೆಂಬ ತಮ್ಮ ಮಗನಿಗೆ ಉಪದೇಶಿಸಿದನು ಆ ಶುಕರು ಗಂಗಾತೀರದಿ ವೈರಾಗ್ಯವನ್ನು ತಾಳಿ ಪ್ರಾಯೋಪವಿಷ್ಟನಾದ ಮಹಾರಾಜ ಪರೀಕ್ಷಿತನಿಗೆ ಋಷಿಸಬೆಯಲ್ಲಿ ಪೇಳಿದರು. ಆಗ ನಾನಲ್ಲಿ ಯೋಗ್ಯಸ್ಥಾನದಲ್ಲಿ ಕುಳಿತು ಅವರ ಪರಮಾಗ್ರಹದಿಂದ ಬೂರಿತೇಜನಾದ ರಾಜನಿಗೆ ಆ ಗುರುಗಳು ಪೇಳಿದ ಭಾಗವತವನ್ನಧ್ಯಯನ ಮಾಡಿರುವೆನು ಈಗ ನಾನದನ್ನು ಯಧಾಶ್ರುತವಾಗಿ ನನ್ನ (ಪ್ರಜ್ಞೆಯ) ಯೋಗ್ಯತೆಯಂತೆ ನಿಮಗೆ ಪೇಳುವೆನು ದರ್ಮ ಜ್ಞಾನಾದಿ ಗುಣಗಳಿಂದ ಶ್ರೀಕೃಷ್ಣನು ತನ್ನ ಮೂಲರೂಪವನ್ನೈದುತ್ತಿರಲು ಈ ಕಲಿಯುಗದಲ್ಲಿ ಜ್ಞಾನ ದರ್ಮ ಪ್ರದರ್ಶನೆಗಾಗಿ ಬಾಗವತವನ್ನು ಶ್ರೀವ್ಯಾಸನೇ ರಚಿಸಿದನು

## ೪ ಭಾಗವತ ರಚನೆ

ಎಂದು ಸೂತನು ಹೇಳಲು ದೀರ್ಘ ಸತ್ರಯಾಗರತರಾದ ಮುನಿಗಳಲ್ಲಿ ಋಷಿ ಕುಲಾಚಾರ ರಕ್ಷಕನೂ ಜ್ಞಾನವಯೋವೃದ್ಧನೂ ಋಗ್ವೇದನಿಷ್ಣಾತನೂ ಆದ ಶೌನಕನು ಶ್ರದ್ಧೆಯಿಂದ ಇಂತೆಂದನು—

ಸೂತ! ಸೂತ! ಪೂಜ್ಯನಾದ ಶುಕನು ರಾಜನಿಗೆ ಹೇಳಿದ ಪುಣ್ಯಮಾದ ಭಾಗವತ ವನ್ನು ನಮಗೆ ಹೇಳು ಯಾವ ಯುಗದಲ್ಲಿ, ಎಲ್ಲಿ, ಅವರೀರ್ವರ ಸಂವಾದವು ನಡೆಯಿತು? ಶುಕನೇಕೆ ಅದನ್ನು ಹೇಳಿದನು? ಶ್ರೀವ್ಯಾಸನಾದರೂ ಈ ಪುರಾಣಸಂಹಿತೆಯನ್ನೇಕೆ ರಚಿಸಿದನು?

ಶ್ರೀಶುಕನು ಮಹಾಯೋಗಿಯು, ಸರ್ವದೇಶಕಾಲವ್ಯಾಪ್ತನಾದ ಶ್ರೀಹರಿಯನ್ನಪ ರೋಕ್ಷದಿಂ ನೋಡಿದವನು ಸರ್ವವೀಶ್ವರಾಧೀನವೆಂದರಿತು ನನ್ನದು ಪರರದೆಂಬುವ ಭೇದಬುದ್ಧಿಯನ್ನು ತೊರೆದವನು ಹರಿಯಲ್ಲಿಯೇ ರತವಾದ ಮತಿಯಿಂದ ಅಜ್ಞಾನಾದಿ ದೋಷಗಳನ್ನು ದೂರೀಕರಿಸಿದವನು ಜ್ಞಾನೈಶ್ವರ್ಯಾದಿ ಗುಣಗಳನ್ನು ತೋರದೇ ಮೂಢ ರಂತಿರುವವನು ಮೂಕ ಬಧಿರ ಮತ್ತರಂತೆ ಕಾಣುತ್ತಾ ಹಸ್ತಿನಾವತಿಯಲ್ಲಿ ಯದೃಚ್ಛೆಯಿಂದ ಬಂದ ಆ ಯೋಗಿವರನನ್ನು ಕುರುಜಾಂಗಲದ ಜಾನಪದರಾಗಲಿ ಪೌರರಾಗಲಿ ಶುಕರೇ ಇವರೆಂದು ತಿಳಿದರೆಂತು? ಹರಿಯ ಪರಮ ಶುಭಚಾರಿತಾತ್ಯಂತಮಂಗಲವಾದ ರಾಜರ್ಷಿ ಬ್ರಹ್ಮರ್ಷಿಗಳಿಂದಲೂ ಪ್ರಸಂಗವು ನಡೆದುದೆಂತು?

ಶುಕನಾದರೂ ಪಂಚಯಜ್ಞರತರಾದ ಗೃಹಪತಿಗಳ ಮನೆಗಳಿಗೆ ಭಿಕ್ಷಾಚರಣೆಗಾಗಿ ಬಂದು ಒಂದು ಗೋದೋಹನಕಾಲ ಮಾತ್ರ ಅವಾಙ್ಮುಖನಾಗಿ ನಿಂತು, ಅವರು ನೀಡಲಿ ಬಿಡಲಿ ಅವರ ಮನೆಯನ್ನು ತನ್ನ ಪಾದಕ್ರಮಣಗಲಿತ ಧೂಳಿಯಿಂದ ಪವಿತ್ರವನ್ನು ಮಾಡಿ ಪೋಗುವನಂತೆ ಅವನ ದರ್ಶನ, ಸಂಭಾಷಣೆಗಳಷ್ಟು ದುರ್ಲಭವಾಗಿರಲು ಉಪದೇಶ ವಂತೂ ದುರ್ಲಭತರವಾಗಿದೆಯಲ್ಲವೇ?

ಅಭಿಮನ್ಯುಸುತನಾದ ಪರೀಕ್ಷಿತನನ್ನು ಭಾಗವತೋತ್ತಮನೆನ್ನುವರು ಕೃಷ್ಣರಕ್ಷಿತ ನಾದ ಆ ರಾಜರ್ಷಿಯ ಜನನವೃತ್ತಾಂತವನ್ನು ನಮಗೆ ಹೇಳು ಆ ಚಕ್ರವರ್ತಿಯು ಸಕಲ ಸಾರ್ವಭೌಮ ಸಂಪತ್ತಿಯನ್ನು ಗಣನೆ ಮಾಡದೆ ಗಂಗಾನದಿಯಲ್ಲಿ ಪ್ರಾಯೋಪವಿಷ್ಟ ನಾಗಲು ಕಾರಣವೇನು? ಮಂಡಲಪತಿಗಳಾದ ಶತ್ರುರಾಜರೂ ಕೂಡ ತಮ್ಮ ಕ್ಷೇಮಕ್ಕೆಂದು ತಂದ ಕಪ್ಪಕಾಣಿಕೆಗಳನ್ನು ಯಾವ ಮಹಾರಾಜನ ಪಾದಪೀಠದಲ್ಲಿ ಸಮರ್ಪಿಸಿ ನಮಿಸು ವರೋ ಅಂತಹ ವೀರನಾದ ಪರೀಕ್ಷಿದ್ರಾಜನು ದುಸ್ತ್ಯಜವಾದ ಪ್ರಾಣವನ್ನು ರಾಜ್ಯ ಸಂಪತ್ತನ್ನು ಕೂಡ ಬಿಡಲಿಚ್ಛಿಸಿದ್ದೇತಕ್ಕೆ? ಉತ್ತಮ ಶ್ಲೋಕ ಪರಾಯಣರಾದ ಭಾಗವ ತೋತ್ತಮರು ಸುಜನ ಲೋಕಕ್ಕೆ ಕ್ಷೇಮವಾಗಲಿ, ಐಶ್ವರ್ಯವಾಗಲಿ ಎಂದು ತದರ್ಥ ವಾಗಿ ಶ್ರಮಿಸುತ್ತ ಜೀವಿಪರು ಇಂತಹ ಪರಾರ್ಥೈಕಜೀವನನಾದ ಪರೀಕ್ಷಿತನು ಅಖಂಡ ಭೂಮಂಡಲಾಧಿಪತ್ಯವನ್ನು ತ್ಯಜಿಸಿ ವೈರಾಗ್ಯವನ್ನು ವಹಿಸಿ ದೇಹವನ್ನೇ ಬಿಟ್ಟನಲ್ಲವೆ?

ಅದೇತಕ್ಕೆ? ಪುರಾಣಾದಿ ನಿರೂಪಣ ನಿಪುಣನಾದ ನೀನಾವಿಷಯವನ್ನೆಲ್ಲ ನಮಗೆ ಪೇಳು ಎಂದು ಶೌನಕನು ಕೇಳಿದನು—

ಆಗ ಸೂತನು ಪೇಳಿದನು—ದ್ವಾಪರಯುಗದ ಪರ್ಯವಸಾನ ಸಮಯದಲ್ಲಿ ಪರಾಶರರಿಂದ ಉಪರಿಚರನ ಸುಪುತ್ರಿಯಾದ ಸತ್ಯವತೀದೇವಿಯಲ್ಲಿ ನಿತ್ಯಜ್ಞಾನಿಯಾದ ಶ್ರೀಹರಿಯು ವೇದವ್ಯಾಸನಾಗಿ ಪುಟ್ಟಿದನು ಒಂದು ದಿನ ಸರಸ್ವತೀ ತೀರದಲ್ಲಿದ್ದ ತನ್ನ ಆಶ್ರಮದಲ್ಲಿ ಕುಳಿತಿದ್ದನು ಶುದ್ದನಾಗಿ ಸ್ನಾನ ಸಂಧ್ಯಾದಿ ಕೃತ್ಯಗಳನ್ನು ಮುಗಿಸಿ ಏಕಾಂತ ದಲ್ಲಿ ಆಸೀನನಾಗಿದ್ದನು. ಸೂರ್ಯನು ಉದಯವಾಗುತ್ತಿರಲು ಆ ಹೊಂಬಿಸಿಲಾ ಋಷಿಯ ನೀಲ ದೇಹಕಾಂತಿಗೆ ಸುವರ್ಣಚ್ಛವಿಯಂ ಕೊಡುತ್ತಿದ್ದಿತು.

ತ್ರಿಕಾಲಜ್ಞಾನಿಯಾದ ಬಗವಂತನು ಮಹಾವೇಗದಿಂದೋಡುವ ಕಾಲಮಹಿಮೆ ಯಿಂದ ಆಗುವ ಯುಗದರ್ಮಗಳ ಸಾಂಕರ್ಯವನ್ನು ಮನುಜಶರೀರಾದಿ ಪದಾರ್ದಗಳ ಶಕ್ತಿಹ್ರಾಸವನ್ನು ಶ್ರದ್ದೆಯಿಲ್ಲದ, ಸಾದುಗಳಲ್ಲದ, ದಾರಣಾಬುದ್ಧಿರಹಿತರಾದ, ನಿರ್ಭಾಗ್ಯರೂ, ಅಲ್ಪಾಯುಷ್ಯರಾದ ಮನುಜರನ್ನು ದಿವ್ಯಜ್ಞಾನದಿಂದ ಮೊದಲೇ ಕಂಡನು ಸರ್ವದರ್ಮಾಶ್ರಮಗಳಿಗೆ ಹಿತವು ಹೇಗಾದೀತೆಂದು ಚಿರಕಾಲ ಆಲೋಚಿಸಿ ನಿತ್ಯಜ್ಞಾನ ಮಹಾನಿದಿಯಾದ ವ್ಯಾಸನು ಹೋತಾ, ಅದ್ವರ್ಯು, ಉದ್ಗಾತಾ, ಬ್ರಾಹ್ಮಣನೆಂಬುವ ಯಜ್ಞಕರ್ತೃಗಳಿಂದ ಕೂಡಿದ ಯಜ್ಞಾದಿಗಳಿಂದ ಕ್ಷೇಮವಾದೀತೆಂದು ಯಜ್ಞಪರಂಪರಾ ಪ್ರವರ್ತನೆಗಾಗಿ ವೇದವನ್ನು ಅವಿಬಕ್ತವಾಗಿದ್ದುದನ್ನು ನಾಲ್ಕು ವಿದವಾಗಿ ಭಾಗ ಮಾಡಿದನು ಇತಿಹಾಸವೆನಿಸಿದ ಬಾರತವನ್ನು ರಚಿಸಿದನು ಅದು ಪಂಚಮವೇದವೆಂದು ಖ್ಯಾತವಾಗಿದೆ ಮತ್ತು ಪುರಾಣಗಳನ್ನು ವೇದಾರ್ದ ವಿವರಣೆಗಾಗಿ ರಚಿಸಿದನು

ಋಗ್ವೇದವನ್ನು ಪೈಲನಿಗೂ, ಸಾಮವೇದವನ್ನು ಜೈಮಿನಿಗೂ, ಯಜುರ್ವೇದವನ್ನು ವೈಶಂಪಾಯನ ಸೂರ್ಯಾದಿಗಳಿಗೂ, ಅಥರ್ವಣವೇದವನ್ನು ಪರುಣಪುತ್ರ ಸುಮಂತನಿಗೂ ಉಪದೇಶಿಸಿದನು ಇತಿಹಾಸ ಪುರಾಣಗಳನ್ನು ನಮ್ಮ ತಂದೆಯಿಂದ ರೋಮಹರ್ಷಣನಿಗೆ ದಯಪಾಲಿಸಿದನು ಆ ಋಷಿವರ್ಯರು ಶಿಷ್ಯ ಶಿಷ್ಯರಿಗೆ ಉಪದೇಶಿಸಿದ ಆ ವೇದ ಭಾಗಗಳು ಶಾಖೋಪಶಾಖಾ ಭೇದೇನ ವಿಸ್ತೃತವಾಗಿವೆ. ಅಲ್ಪಜ್ಞರಾದ ಮನುಜರೀವೇದಗಳ ನಿಜಾರ್ದವಂ ತಿಳಿಯಲಾರರೆಂದರಿತು ಕೃಪಣವತ್ಸಲನಾದ ವ್ಯಾಸನು ಕರ್ಮಗಳೇ ಹಿತವೆಂದು ಪ್ರವೃತ್ತ ಕರ್ಮರತರಾದವರಿಗೆ ಮೋಕ್ಷವಾಗಲೆಂದು ಕರುಣೆಯಿಂದ ಸ್ತ್ರೀ ಶೂದ್ರ ದ್ವಿಜಾಭಾಸರಿಗೂ ಸುಜನರಿಗೆಲ್ಲಾ ಜ್ಞಾನವಾಗಲಿ ಎಂದು ಬಾರತವನ್ನು ರಚಿಸಿದನು.

ಶೌನಕಾದಿಗಳೇ! ಈ ರೀತಿಯಾಗಿ ಸದಾ ಬೂತಗಳ ಮುಕ್ತಸಾಧನ ನಿರೂಪಣದಲ್ಲಿ ತೊಡಗಿದ್ದರೂ ವ್ಯಾಸನ ಮನಸ್ಸಿಗೆ ತೃಪ್ತಿಯಾಗಲಿಲ್ಲ ಸರಸ್ವತೀ ನದೀತೀರದ ಏಕಾಂತ ಸ್ಥಲದಲ್ಲಿ ಕೂತು ಅವನಿಂತು ಚಿಂತಿಸಿದನು. 'ದೃತವ್ರತನಾದೆ, ವೇದಗಳನ್ನೋದಿದೆ ಗುರುಗಳನ್ನೂ ಸೇವಿಸಿದೆ ಅಗ್ನಿಹೋತ್ರನಿಗಾಹುತಿಗಳನ್ನರ್ಪಿಸಿದೆ. ನಿಷ್ಕಾಪಟ್ಯದಿಂದ ಗುರು ಗಳ ಅನುಶಾಸನಗಳನ್ನು ಪಾಲಿಸಿದೆ ಬಾರತದ ನೆಪದಿಂದ ವೇದಾರ್ದಗಳನ್ನರುಹಿದೆ

ಸ್ತ್ರೀಶೂದ್ರಾದಿಗಳೂ ಉದ್ಧಾರವಾಗಲು ಸಾಕಾದ ದರ್ಮಗಳನಾಪಂಚಮವೇದದಲ್ಲಿ ಚೆನ್ನಾಗಿ ಪ್ರತಿಪಾದಿಸಿದೆ. ಆದರೂ ಈ ನನ್ನ ವ್ಯಾಪ್ತವಾದ ಸಮರ್ದವಾದ ಮನಸ್ಸಿಗೇಕೋ ತೃಪ್ತಿಯಾಗಿಲ್ಲ. ಅವತಾರಕಾರ್ಯವಿನ್ನೂ ಅಸಂಪೂರ್ಣವಾದಂತೆ ತೋರುತ್ತಿದೆ. ಪರಮ ಹಂಸರಿಗೆ ಪ್ರಿಯವಾದ್ದರಿಂದ ಅಚ್ಯುತನಿಗೂ ಪ್ರಿಯಕರವಾದ ಬಾಗವತ ದರ್ಮಗಳನ್ನು ನಾಕಷ್ಟು ನಿರೂಪಿಸಿಲ್ಲವೋ ಏನು?" ಎಂದು ಖಿನ್ನನಾದಂತೆ ಭಕ್ತೋದ್ಧಾರಕ್ಕಾಗಿ ಚಿಂತಿಸುವ ಕೃಷ್ಣದ್ವೈಪಾಯನರ ಆಶ್ರಮಕ್ಕೆ ನಾರದನು ಬಂದನು. ತತ್‌ಕ್ಷಣದಲ್ಲಿ ವ್ಯಾಸನು ನಾರದ ನನ್ನೆದುರುಗೊಂಡು ಕರೆತಂದು ಯದಾಯೋಗ್ಯವಾಗಿ ಗೌರವಿಸಿದನು

## ೫ ನಾರದ–ಬಾದರಾಯಣ ಸಂವಾದವು

ಆಗ ಸುಖಾಸೀನನಾದ ವೀಣಾಪಾಣಿ ದೇವರ್ಷಿಯು ತನ್ನನ್ನೇ ನೋಡುತ್ತಿರುವ ಬ್ರಹ್ಮರ್ಷಿ ವ್ಯಾಸನನ್ನು ಕಂಡು ಮಂದಹಾಸವಂ ಮಾಡುತ್ತಲಿಂತು ಕೇಳಿದನು.

"ಪಾರಾಶರ್ಯ! ಐಶ್ವರ್ಯಾದ್ಯನಂತಬಾಗ್ಯನಿಧೇ! ಸ್ವತ ಏವ ಕೃತಾವತಾರ ಕಾರ್ಯ ನಾಗಿ ಶರೀರಮಾನಸಗಳಲ್ಲಿ ಸಂತೋಷದಿಂದಿರುವೆಯಲ್ಲವೇ? ವೇದವನ್ನು ಚೆನ್ನಾಗಿ ವಿಚಾರ ಮಾಡಿರುವಿ, ವೇದವೇದ್ಯ ಬ್ರಹ್ಮಸ್ವರೂಪವನ್ನೂ ಅರಿತಿರುವಿ, ವೇದಶಾಸ್ತ್ರಾರ್ಥ ಪರಿಬೃಂಹಿತವಾದ ಪುರುಷಾರ್ದಪ್ರದವಾದ ಬಾರತವನ್ನು ರಚಿಸಿರುವುದರಿಂದಲೇ ನಿನ್ನ ಅವತಾರ ಪ್ರಯೋಜನವು ಸಂಪೂರ್ಣವೇ ಸರಿ ಆದರೂ ಅಕೃತಾರ್ದನಂತೆ ತೋರು ತ್ತಿರುವುದಕ್ಕೆ ಕಾರಣವೇನು, ಪ್ರಬೋ!"

ಎನ್ನಲು ವ್ಯಾಸನು ಪೇಳಿದನು "ನಿಜ, ನಾರದಾ! ನೀ ಪೇಳಿದ್ದೆಲ್ಲ ಸತ್ಕಾರ್ಯ ಗಳೆನ್ನಿಂದಾದವು. ಆದರೆ ತೃಪ್ತಿಯಾಗದಿರುವುದಕ್ಕೆ ಕಾರಣವೇನು ನೀನೇ ಪೇಳು. ಹರಿನಾಬಿ ಸಂಬೂತನ ಸುತನಲ್ಲವೇ ನೀನಾದ್ದರಿಂದ ಪುರಾಣ ಪುರುಷನನ್ನುಪಾಸಿಸಿ ಎಲ್ಲವನ್ನೂ ತಿಳಿದಿರುವಿ. ಪ್ರಕೃತಿ ಗುಣಗಳ ಲೇಪವಿಲ್ಲದೆ ಅದೇ ಗುಣಗಳಿಂದ ಸೃಷ್ಟಿ ಸ್ಥಿತಿ ಸಂಹಾರ ಗಳನ್ನು ಮಾಡುವ ಮುಕ್ತಾಮುಕ್ತ ಜಗನ್ನಿಯಾಮಕನಾದ ಹರಿಯ ರಹಸ್ಯವ ನೀನರಿತಂತೆ ಯಾರು ತಿಳಿದಾರು? ಸೂರ್ಯನಂತೆ ಅವ್ಯಾಹತ ಗತಿಯಿಂದ ತ್ರಿಲೋಕಗಳಲ್ಲಿ ಸಂಚರಿಸಿ, ವಾಯುವಿನಂತೆ ಅಂತಸ್ಸಾಕ್ಷಿಯು ಆಗಿರುವ ನೀನು ಪರಬ್ರಹ್ಮ-ಶಬ್ದಬ್ರಹ್ಮಗಳಲ್ಲಿ ನಿಷ್ಣಾತ ನಾದ ನನ್ನ ಕೃತಕೃತ್ಯತೆಯು ಎಂತಾದೀತೆಂದು ಆಲೋಚಿಸಿ ಪೇಳು "

ನಾರದನು ವಿಜ್ಞಾಪಿಸಿದನು, "ಮುನಿವರ್ಯ! ಮಂದಾದಿಕಾರಿಜನರಿಗೂ ಸುಗಮ ವೆನಿಸುವಂತೆ ಬಗವನ್ಮಹಿಮೆಯನ್ನು ನೀನು ವರ್ಣಿಸಿಲ್ಲವೋ ಏನೋ! ಅದರಿಂದ ನಿನ್ನ ಮನಸ್ಸಿಗೆ ಅಲಂಬುದ್ಧಿ ಉಂಟಾಗಿಲ್ಲ ಭಾರತವು ದುರ್ಗಮಾರ್ಥವಾಗಿದೆ ಅದೊಂದ ರಿಂದಲೇ ಸಾಕಷ್ಟು ಸಜ್ಜನೋದ್ಧಾರವಾಗದೆಂದು ನೀ ಬಾವಿಸಿರುವುದು ಸರಿಯಾಗಿದೆ ಧರ್ಮಾದಿಗಳನ್ನು ಸಾಕಷ್ಟು ಪೇಳಿದ್ದರೂ ವಾಸುದೇವನ ಮಹಿಮಾವರ್ಣನೆಯು ಇನ್ನೂ ಮಾಡಬೇಕಾಗಿದೆ."

"ಯಾವ ಶಾಸ್ತ್ರವು ಚಿತ್ರವಿಚಿತ್ರ ಪದಬಂಧಗರ್ಭಿತವಾಗಿದ್ದರೂ ಜಗತ್ಪವಿತ್ರವಾದ ಹರಿಚರಿತ್ರೆಯಂ ಕೀರ್ತಿಸದಿದ್ದರೆ ಅದು ವಾಯಸತೀರ್ಥವೆನಿಸುವದು ಆಗಲಿ ಹಂಸಗಳಲ್ಲಿ ಸ್ನಾನಮಾಡಲು ಬರಲಾರವು ಜೀವನಮಾತ್ರೋಪಯೋಗಿಯಾದೀತಾಶಾಸ್ತ್ರವಾಗಲಿ ಮೋಕ್ಷಸಾಧನಮೆನಿಸಲಾರದು ಮತ್ತು ಸಜ್ಜನರದನ್ನು ಸ್ವೀಕರಿಸರು

"ಯಾವ ಶಾಸ್ತ್ರವು ಅಚಿತ್ರಪದವಾದರೂ ಅಲಂಕಾರ ರಹಿತವಾದರೂ ಅನಂತನ ಯಶೋಗಾನ ಮಾಡುವುದೋ ಅದೇ ಮೋಕ್ಷಸಾದನವಾದ್ದರಿಂದ ಶುಕಾದಿಗಳು ಸನಕಾದಿ ಗಳೂ ಕೂಡ ಅದನ್ನು ಆದರದಿಂದ ಕೇಳುವರು. ಗಾನ ಮಾಡುವರು ಶಿರಸಾ ಅನು ಮೋದಿಸಿ ಸ್ವೀಕರಿಸುವರು ಅದೇ ಜನತಾ ಪಾಪವಿನಾಶ ಹೇತುವಾಗಿದೆ

"ಸ್ವತಃ ಮುಕ್ತಿಸಾಧನವೂ ವಿಷಯಮಲರಹಿತವೂ ಅತ್ಯಂತ ವಿರಕ್ತಿಸಹಿತವೂ ಆದ ಪರೋಕ್ಷಜ್ಞಾನವು ಕೂಡ ಅಚ್ಯುತ ಬಕ್ತಿ ಬಂದುರವಾಗದಿದ್ದರೆ ಮೋಕ್ಷದವಾಗಲಾರದು. ಅಂದಮೇಲೆ ಬಂದಕವೂ ಅಮಂಗಲವೂ ಹರಿಗನರ್ಪಿತವೂ ಆದ ಕಾಮ್ಯಕರ್ಮವು ವ್ಯರ್ದವೆಂದು ಹೇಳಬೇಕೇ? ಕರ್ಮವಾಗಲಿ ಜ್ಞಾನವಾಗಲಿ ಹರಿಬಕ್ತಿ ರಹಿತವಾದೊಡೆ ನಿಷ್ಫಲವೇ ಸರಿ ಆದ್ದರಿಂದ ಅಪರಿಮಿತೈಶ್ವರ್ಯಾದಿಸಂಪನ್ನ! ಶುಚಿಶ್ರವ! ಸತ್ಯರತ! ದೃತವ್ರತ! ಹೇ ವ್ಯಾಸ ಭಗವನ್! ಸಕಲಸಜ್ಜನ ಸಂಸಾರಬಂದವಿದ್ವಂಸನವಾದ ಉರು ಕ್ರಮನ ಪರಾಕ್ರಮ ಲೀಲೆಗಳನ್ನು ಸಮಾದಿಬಾಷೆಯಿಂದ ರಚಿಸು ಕೇವಲ ದರ್ಮಾದಿ ವಿಷಯಕವಾದ ಹರಿಕಥಾಬಾಹಿರವಾದ ಶಾಸ್ತ್ರರಚನೆಯಿಂದ ಅನರ್ದವೇ ಆದೀತು! ಹೇಗೆಂದರೆ ಸ್ವರ್ಗಾದಿಗತಲಾವಣ್ಯಾದಿರೂಪ, ಮದನ ಕಲಿಕಾ ರತಿಮತೀತ್ಯಾದಿ ನಾಮಗಳಂ ಕೇಳಿ ತತ್ಪದಾರ್ದಗಳಲ್ಲಿ ಮನಸ್ಸನ್ನು ಮಾಡಿ ಅವೇ ಸುಖ ಹೇತುಗಳೆಂಬ ಬ್ರಮೆಯಿಂದ ಪ್ರವೃತ್ತಿ ಕರ್ಮವಂ ಮಾಡಿದ ಮನುಜರು ಸ್ವರ್ಗ ನರಕಗಳನ್ನು ಕರ್ಮಫಲವಾಗಿ ಪೊಂದುತ್ತಾ ಎಂದೆಂದಿಗೂ ಸಮುದ್ರಮದ್ಯದಲ್ಲಿ ವಾತಾಹತವಾದ ಪೋತದಂತೆ ದಡವನ್ನು ಸೇರಲಾರರು ಅವರಿಗೆ ಜ್ಞಾನದಾರ್ಢ್ಯತೆ ಉಂಟಾಗಲಾರದು. ಸ್ವಾಮೀ! ಪ್ರವೃತ್ತಿದರ್ಮದ ಉಪದೇಶವು ನಿಂದಿತವಲ್ಲವೇ? ಮತ್ತು ಅದು ಸಜ್ಜನರಿಗೆ ಮಾಡುವುದನ್ಯಾಯವೇ ಸರಿ ಗಿಡದಿಂದ ಕೆಳಗೆ ಬಿದ್ದವನನ್ನು ಕರೆದು ಕೋಲಿನಿಂದ ಹೊಡೆದಂತೆ ಮೊದಲೇ ಪ್ರಾಕೃತನಾಗಿ ಕಾಮ್ಯ ಕರ್ಮರಕ್ತವಾದ ಮನಸ್ಸಿಗೆ ವಶನಾಗಿ ಸಾಂಸಾರಿಕ ತಾಪವನ್ನುಣ್ಣುತ್ತಿರುವ ಮನುಜ ನಿಗೆ ಕಾಮ್ಯ ಕರ್ಮ ನಿರೂಪಕ ಶಾಸ್ತ್ರ ರಚನೆಯಿಂದ ಉಪದೇಶದಿಂದ ಅನರ್ದವೇ ಆಗು ವುದು. ಅದನ್ನೇ ಅವನು ದರ್ಮವೆಂದರಿತು ಬಿಡದೆ ಸೇವಿಸಿ ಸಂಸಾರಬಂದದಿಂದ ಎಂದಿಗೂ ಮುಕ್ತನಾಗದಿರುವನು.

"ಪ್ರಬುವಾದ ವಾಸುದೇವನು ನಿವೃತ್ತಿ ಕರ್ಮದಿಂದ ಪ್ರೀತನಾಗಿ ಕೊಡುವ ಸುಖ ವನಂತವಾಗಿದೆ ಅನಂತ ಮಹಿಮನಾದ ರಮಾಕಾಂತನಲ್ಲಿ ಬಕ್ತಿಯನ್ನು ಮಾಡಬೇಕು ಎಂದು ನಿರೂಪಿಸುವ ಬಾಗವತಶಾಸ್ತ್ರವನ್ನೇ ನೀನು ರಚಿಸು ಸುತರಾಂ ಅದರ್ಮವೇ ಆದ ಪ್ರವೃತ್ತಿಕರ್ಮವನ್ನು ಬಿಟ್ಟು ಹರಿಚರಣ ಸರೋಜವನ್ನು ಸೇವಿಪ ಬಕ್ತನೊಂದು

ವೇಳೆ ಅಪರೋಕ್ಷವನ್ನು ಹೊಂದದೆ ಹೋದರೂ ಫಲಪರಿಪಾಕವನ್ನು ಸಾಧಿಸಿಕೊಡುವ ನಿವೃತ್ತಿ ಕರ್ಮಾನುಷ್ಠಾನವು ಅಪರೋಕ್ಷಜ್ಞಾನವು ಕೂಡ ಜನ್ಮಾಂತರದಲ್ಲಾದರೂ ಲಭಿಸು ವದು ನಿಶ್ಚಯವು ಆದರೆ ಕೇವಲ ಪ್ರವೃತ್ತಿ ಧರ್ಮಭಜಕನಾದವನಿಗೆ ಹರಿಪ್ರೀತಿಯೂ ಇಲ್ಲ, ಹರಿಕರುಣಾ ಸಾಧ್ಯಗಳೇ ಆದ ಐಹಿಕಸುಖಗಳೂ ಆಗಲಾರವು ಪ್ರವೃತ್ತಿಧರ್ಮಾನು ಷ್ಠಾನವಿಲ್ಲದಿದ್ದರೂ ಸ್ವತಂತ್ರನಾದ ಸ್ವಾಮಿಯಿಂದ ದುಃಖವು ಬಂದಂತೆಯೇ ಅವನಿಂದಲೇ ಆಯಾ ಕಾಲದಲ್ಲಿ ಸುಖವು ಕೂಡ ಬಂದೇ ಬರುವುದೆಂದರಿತು ನಿಶ್ಚಿಂತನಾಗಿ ನಿವೃತ್ತಧರ್ಮ ಸೇವನೆಯನ್ನು ಮಾಡುವದೇ ಬುದ್ಧಿವಂತನ ಲಕ್ಷಣವು. ಅದರಿಂದಲೇ ಮೋಕ್ಷವು ಸಿಗು ವುದಲ್ಲವೇ?

ಅಭಕ್ತನಂತೆ ಮುಕುಂದ ಚರಣಾರವಿಂದ ಸೇವಕನು ಎಂದಿಗೂ ಯಾವವಿಧವಾದ ದುರ್ಗತಿಯನ್ನು ಹೊಂದುವುದಿಲ್ಲ ಅರವಿಂದನಾಭ ಚರಣಾರವಿಂದ ಸ್ಮರಣ ಸುಖ ವನ್ನೊಮ್ಮೆ ನೋಡಿದ ಸಾರಾಸಾರ ವಿವೇಕಿಯು ಪುನಃ ಶ್ರೀಹರಿಚರಣ ಸ್ಮರಣೆಯನ್ನೆಂದಿಗೂ ಬಿಡಲಾರನು. ಆ ಮುಕುಂದನೋ ಜಗತ್ತಿನಲ್ಲಿ ಪ್ರತಿಮೆಯಲ್ಲಿ ಹೇಗೋ ಹಾಗೆಯೇ ವ್ಯಾಪಿಸಿ ನಿಂತಿರುವನು ಜಗದ್ವಿಲಕ್ಷಣನಾಗಿರುವನು. ಜಗತ್ತಿಗೆ ಸಂಭವ ಸಂರಕ್ಷಾ ಸಂಹಾರ ಗಳಿವನಿಂದಲೇ ಆಗುವುವು. ಇಂತಹ ಸರ್ವಜ್ಞನು ಸರ್ವಸ್ವತಂತ್ರನು ಸರ್ವಶಕ್ತನು ಸರ್ವ ಸ್ವಾಮಿಯು ಆದ ಶ್ರೀಹರಿಯ ಮಹಿಮೆಯು ನಿನಗೆ ತಿಳಿದೇ ಇದೆ ನಾಹೇಳುವುದೆನ್ನ ಉದ್ಧಾರಕ್ಕಾಗಿ ಹೊರತು ಅನ್ಯದಾ ಇಲ್ಲ ಉಪಾಧ್ಯಾಯರ ಮುಂದೆ ಬಾಲಕರು ಪಾಠ ವನ್ನೊಪ್ಪಿಸುವಂತೆ ಅವ್ಯಾಕೃತಾಕಾಶದಂತೆ ಅನಂತ ಜ್ಞಾನವಂತನು ಸಾಕ್ಷಾದ್ಭಗವಂತನಾದ ನಿನ್ನ ಮುಂದೆ ನನ್ನ ಪರಿಮಿತ ಜ್ಞಾನವನ್ನು ತೋಡಿಸಿ ಅಜನಾದ ಅಮೋಘಜ್ಞಾನನಾದ ಪರಮಾತ್ಮನ ಕಲಾಸಂಭೂತನಾದ ನಿನ್ನನ್ನು ಜಗನ್ಮಂಗಲಕರವಾದ ಭಾಗವತವನ್ನು ರಚಿ ಸೆಂದು ಕೇಳಿಕೊಳ್ಳುತ್ತಿರುವೆನು ಪ್ರಭೂ! ತಪಸ್ಸು, ವೇದಾಭ್ಯಾಸ, ಯಜ್ಞಯಾಗಾದಿಕರ್ಮ, ವೇದಜ್ಞಾನ, ದಾನ, ಯಾತ್ರೆ, ಸಚ್ಚರಿತ್ರೆ ಇವುಗಳಿಗೆ ವ್ಯರ್ಥವಾಗದ ಫಲವೆಂದರೆ ಉತ್ತಮ ಶ್ಲೋಕನ ಗುಣಾನುವರ್ಣನವೇ ಎಂದು ಜ್ಞಾನಿಗಳು ಹೇಳುವರು "

ಜ್ಞಾನಿ ಜನರ ಸೇವೆಯಿಂದ ಭಗವದ್ಭಕ್ತಿಯು ಪುಟ್ಟುವುದು ಜ್ಞಾನಿನಿಂದೆಯಿಂದ ಅನರ್ಥವಾಗುವುದು. ಈ ವಿಷಯದಲ್ಲಿ ನಾನೇ ಸಾಕ್ಷೀಭೂತನಾಗಿರುವೆನೆಂದು ನಾರದನು ತನ್ನ ಪೂರ್ವಜನ್ಮದ ವೃತ್ತಾಂತವನ್ನು ವ್ಯಾಸನಿಗೆ ಹೇಳಿದನು

ಪೂರ್ವಕಲ್ಪದಲ್ಲಿ ನಾನು ದಾಸೀಪುತ್ರನಾಗಿದ್ದೆನು. ನನ್ನ ತಾಯಿಯು ಅದೃಷ್ಟದಿಂದ ವೇದವೇತ್ತೃಗಳಾದ ಪವಿತ್ರ ಬ್ರಾಹ್ಮಣರ ಮನೆಕೆಲಸ ಮಾಡುವಳು ನಾನು ಬಾಲಕ ನಾಗಿದ್ದರೂ ಆಟಪಾಟಗಳಲ್ಲಿ ಲೋಲನಾಗದೆ ಇದ್ದೆನು ಒಂದು ಸಲ ಆಷಾಢದಲ್ಲಿ ಕೆಲ ಯೋಗಿಪುಂಗವರು ಆ ಮನೆಗೆ ಬಂದು ಚಾತುರ್ಮಾಸ್ಯಸಂಕಲ್ಪ ಮಾಡಿ ಅಲ್ಲೇ ತಂಗಿದರು ಆ ಸನ್ಯಾಸಿಗಳು ಚಾಪಲ್ಯವಿಲ್ಲದೆ ಕ್ರೀಡಾರತನಾಗದೆ ಇಂದ್ರಿಯಜಯವುಳ್ಳ ಅರ್ಭಕನಾದ ನನ್ನನ್ನು ಕಂಡು ಕೃಪೆ ಮಾಡಿ ತಮ್ಮ ಸೇವಾಸೌಲಭ್ಯವನ್ನೊದಗಿಸಿ ಕೊಟ್ಟರು. ನಾನಾದರೂ ಹೆಚ್ಚುಮಾತನಾಡದೆ ಅವರ ಉಚ್ಛಿಷ್ಟಲೇಪನ, ಭಕ್ಷಣಾದಿಗಳಲ್ಲಿ ತೊಡಗಿ ದಿನಕ್ಕೊಂದೇ

ನಲ ಬುಜಿಸುತ್ತಾ, ಹರಿಯ ಚರಣವಂ ಬಜಿಸುತ್ತಾ ಪಾಪಗಳಿಂದ ದೂರನಾದೆ ನನ್ನ ಮನಸ್ಸರೋವರವು ಹರಿಚರಣಸ್ಮರಣಗಂಗಾಸಂಗದಿಂದ ನಿರ್ಮಲವಾಯಿತು. ವೈರಾಗ್ಯ ಬಕ್ತಿಭರಿತನಾಗಿ ಶ್ರವಣಾಸಕ್ತನಾದೆ ಶ್ರುತಿಮನೋಹರವಾದ ಹರಿಚರಿತೆಗಳನ್ನವರು ಪಾಡುತ್ತಿರಲು ಅವರ ಅನುಗ್ರಹದಿಂದಲ್ಲಿ ಕೂತು ತ್ರಿಷವಣಗಳಲ್ಲಿ ಶ್ರದ್ಧೆಯಿಂದ ಕೇಳಿದೆ. ಕ್ರಮೇಣ ಪರಮಮಂಗಲಕೀರ್ತಿಯಾದ ಹರಿಚರಣಂಗಳ ಮಂಗಳಧ್ಯಾನವೆನಗೊದಗಿ ಬಂತು. ರಾಗಾದಿ ದೋಷರಹಿತವಾದೆನ್ನ ಮನವು ಅಖಂಡೋಪಾಸನಾಸಕ್ತವಾಯಿತು ಸ್ವೇಚ್ಛೆಯಿಂದ ಲಕ್ಷ್ಮೀದೇವಿಯಂ ಕೂಡಿ ಕಾರ್ಯಕಾರಣಾತ್ಮಕ ಜಗತ್ತನ್ನು ನಿರ್ಮಾಣ ಮಾಡಿ ವ್ಯಾಪ್ತನಾಗಿರುವ ಶ್ರೀಶನೇ ಎನ್ನ ಸ್ವಾಮಿಯು ಬಿಂಬರೂಪನು ಎಂದು ಕಂಡೆ, ಆನಂದಗೊಂಡೆ ನನ್ನಿಂದ ರಾಗಾದಿಗಳಂತೆ ನಿದ್ರಾದಿಗಳೂ ದೂರ ಸರಿದವು. ಬಕ್ತಿಗಂಗೆಯು ಎನ್ನ ಮನದಂಗಣದಿ ಹರಿದಳು ಇದೆಲ್ಲವೂ ಆ ಮಹಾತ್ಮರ ಅನುಗ್ರಹವೇ ಸರಿ!

ಚಾತುರ್ಮಾಸ್ಯಕಾಲವು ಮುಗಿಯುವಾಗ ಆ ಸನ್ಯಾಸಿಗಳು ಪೊರಮಟ್ಟರು ಆಗ ನನ್ನನ್ನು ನೋಡಿ 'ಇವನು ಅನುರಕ್ತನಾದ ಭಕ್ತನು ವಿನೀತನು ಪಾಪರಹಿತನು. ಶ್ರದ್ಧಾಳು ವೆಂದು ಕೃಪಾಳುಗಳಾದ ಆ ಪರಮಪೂಜ್ಯರು ಸಂಪ್ರದಾಯಾಗತವಾದ ರಹಸ್ಯ ಜ್ಞಾನತತ್ತ್ವ ವನ್ನು ಪೇಳಿ ಅನುಗ್ರಹಿಸಿದರು ಅವರ ಉಪದೇಶದಿಂದ ಪರಮಪದವನ್ನೈದಿಸುವ ಶ್ರೀ ವಾಸುದೇವನ ಇಚ್ಛಾಸಾಮರ್ಥ್ಯವಂ ತಿಳಿದು ಅವನ ಬಕ್ತನೆನಿಸಿದೆ. ಕರ್ಮ ರಹಸ್ಯ ವನ್ನಾದರೂ ಅವರೇ ಎನಗೆ ತಿಳಿಸಿದರು. ಸಕಲ ಶುಭ ಕರ್ಮಫಲವನ್ನಾ ಗುಣಗಣಪೂರ್ಣ ನಾದ ನಾರಾಯಣನಿಗರ್ಪಿಸುವುದೇ ಸಕಲ ತಾಪತ್ರಯ ನಿವರ್ತಕವು. ಯಾವ ಪದಾರ್ಥವು ರೋಗಜನಕವೋ ಅದೇ ಪದಾರ್ಥವನ್ನು ರಸಾದಿಗಳಿಂದ ಶುದ್ಧಗೊಳಿಸಿ ಔಷಧವಂ ಮಾಡಿ ಅದೇ ರೋಗವಂ ಕಳೆಯುವಂತೆ ಮನುಜರು ಮಾಡಿದ ಕರ್ಮಗಳೆಲ್ಲವೂ ಸಂಸಾರಕಾರಣ ಗಳೇ ಆದರೂ ನಿರ್ದೋಷ ಗುಣಪೂರ್ಣನಾದ ಶ್ರೀಹರಿಯಲ್ಲಿ ಸಮರ್ಪಿತವಾದೊಡನೆ ಅನೇಕ ಜನ್ಮಸಂಚಿತ ದುಷ್ಕರ್ಮಸ್ವರೂಪನಾಶಕವಾಗುವವು. ಭಗವತ್ಪರಿತೋಷಕವಾದದ್ದೇ ಕರ್ಮವು. ಅದರಿಂದ ಜ್ಞಾನವು, ಆ ಜ್ಞಾನದಿಂದಲೇ ಭಕ್ತಿ, ಅದರಿಂದ ಮುಕ್ತಿ ಆದ್ದರಿಂದಲೇ ಋತ್ವಿಜರೂ ಕೂಡ ಕರ್ಮಗಳನ್ನು ಮಾಡುವಾಗ ಪುನಃ ಪುನಃ ಅವನ ಆಜ್ಞೆಯಂತೆ ಆ ಶ್ರೀಹರಿಯ ಪವಿತ್ರನಾಮಗಳನ್ನುಚ್ಚರಿಸುತ್ತಿರುವರು ಸದಾ ಅವನನ್ನೇ ಸ್ಮರಿಸುವರು. "ಬಲಜ್ಞಾನಾನಂದರೂಪನು ದೈತ್ಯಪ್ರತೀಪನು ಕ್ರೀಡಾದಿಗುಣವಿಶಿಷ್ಟನಾದ ವಾಸುದೇವನೇ! ಹಿರಣ್ಮಯಾತಿಶಯಕಾಂತಿಯುಕ್ತನು ಹಿರಣ್ಯಕೇಶಾದಿ ಅಪ್ರಾಕೃತ ಸರ್ವಾವಯವನಾದ ಪ್ರದ್ಯುಮ್ನನೇ! ಮುಖ್ಯಪ್ರಾಣವಲ್ಲಬನು ಅನನ್ಯಾಧೀನನಾದ ಅನಿರುದ್ಧನೇ! ಪಾಪಕರ್ಷಣ ಶೀಲನು ಸಮಿಚೀನ ಕರ್ಮಫಲಪ್ರದನಾದ ಸಂಕರ್ಷಣನೇ! ನಿನಗೆ ನಮಸ್ಕಾರವು" ಎಂದು ಚತುರ್ಮೂರ್ತಿಯಾದ ಸ್ವಾಮಿಯನ್ನು ಪ್ರಾಕೃತವಿಗ್ರಹ ವಿಧುರನೆಂದರಿತು ಯಜ್ಞಪುರುಷ ನಾದ ಹರಿಪ್ರೀತಿಗಾಗಿಯೇ ಯಜ್ಞಾದಿ ಕರ್ಮಗಳನ್ನು ಮಾಡುವ ಸಜ್ಜನನು ಪರೋಕ್ಷಜ್ಞಾನ ವನ್ನು ಮಾತ್ರವಲ್ಲದೆ ಅಪರೋಕ್ಷಜ್ಞಾನವನ್ನೂ ಹೊಂದುವನು.

ಇಂತು ಸ್ವದರ್ಮದಲ್ಲಿದ್ದು ಸ್ವಯೋಗ್ಯನಿಷ್ಕಾಮಕರ್ಮವನ್ನು ಮಾಡಿದ ನನ್ನಲ್ಲಿ ಕನಿಕರಿಸಿ ಸ್ವವಿಷಯಕ ಜ್ಞಾನವನ್ನು ಬಕ್ತಿಯನ್ನು ಶ್ರೀಹರಿಯು ಅನುಗ್ರಹಿಸಿದನು

ಮಹಾನುಬಾವನಾದ ವ್ಯಾಸದೇವನೇ! ನೀನಾದರೂ ಈಶ್ವರನಾದ ಕಾರಣ ಸಾಂಸಾರಿಕ ದುಃಖಪೀಡಿತರಾದ ಸಜ್ಜನರ ಕ್ಲೇಶನಿವಾರಣವಾದ, ಕೇಶವಯಶೋವಿಶಾಲವಾದ, ಗ್ರಂಥವನ್ನು ರಚಿಸು ಅದರಿಂದ ನಿನ್ನ ಅತೃಪ್ತಿಯು ದೂರವಾಗುವದು.

## ೬ ನಾರದಕೃತ ಭಗವದ್ದರ್ಶನ

ದೇವರ್ಷಿಯ ಜನ್ಮಕರ್ಮಗಳನ್ನು ಕೇಳಿ ಭಗವಾನ್ ವ್ಯಾಸನು ಪುನಃ ನಾರದನನ್ನು ಪ್ರಶ್ನಿಸಿದನು

"ನಾರದಾ! ನಿನಗೆ ಜ್ಞಾನೋಪದೇಶಕರಾದ ಬಿಕ್ಷುವರ್ಯರು ಹೊರಟನಂತರ ಬಾಲಕನಾದ ನೀನೇನು ಮಾಡಿದೆ? ಜ್ಞಾನಾನಂತರ ಕಾಲದಲ್ಲಿ ಹೇಗೆ ಜೀವನವಂ ಕಳೆದೆ? ಕಾಲವು ಒದಗಿಬಂದಾಗ ಆ ಕಳೇಬರವನ್ನು ಹೇಗೆ ಬಿಟ್ಟೆ? ಹಿಂದಿನ ಕಲ್ಪದ ಈ ವಿಷಯಂಗಳನ್ನೆಲ್ಲಾ ಸರ್ವಜ್ಞಾನ ನಿರಾಕರಣ ಸಮರ್ಥವಾದ ಕಾಲಬಲದಿಂದ ಅಳಿಸಿಹೋಗದೇ ನಿನ್ನ ಸ್ಮರಣೆಯಲ್ಲಿರುವ ಬಗೆ ಹೇಗೆ?" ಎನ್ನಲು ನಾರದನು ಪೇಳಿದನು

"ಬಿಕ್ಷುಗಳು ಪೊರಡುವಾಗ ನನಗಿನ್ನೂ ಬಾಲ್ಯವು. ನನ್ನ ತಾಯಿ ಬೇರೆಯಿದ್ದಳು. ಅವಳಿಗೆ ನಾನೊಬ್ಬನೇ ಮಗನು ನನ್ನಲ್ಲಿ ಏನೋ ಸ್ನೇಹ! ತಾನು ಇನ್ನೊಬ್ಬರ ಮನೆಯ ದಾಸಿ! ನಾನೋ ಶ್ರೀಹರಿಯೇ ಗತಿಯೆಂದರಿತು ಈ ಸಾಂಸಾರಿಕ ಬಂದಗಳಂ ಬಿಟ್ಟಿದ್ದೆ. ಆದರೂ ಮೋಹದಿಂದ ತನ್ನ ಕೈಲಾಗುವುದೇನೂ ಇಲ್ಲದಿದ್ದರೂ ನನ್ನ ಯೋಗಕ್ಷೇಮಂಗಳನ್ನು ತಾನು ವಹಿಸಿರುವೆನೆಂದು ರಕ್ಷಿಸುತ್ತಿದ್ದಳು. ಪ್ರಬೋ! ಈಶನಾಡಿಸುವ ಕೈಗೊಂಬೆಗಳಾಗಿದ್ದೂ ಅದೆಷ್ಟು ಸ್ವಾತಂತ್ರ್ಯಬ್ರಾಂತಿಯೋ ಈ ಜೀವರಿಗೆ! ಆಕೆಗೋಸುಗವೇ ನಾನು ಆ ಬ್ರಾಹ್ಮಣರ ಮನೆಯಲ್ಲಿ ಕೆಲಕಾಲವಿದ್ದೆ. ನನಗೈದು ವರ್ಷಗಳು ತುಂಬಿದವು. ದಿಕ್ಕುಯಾವುದು ದೇಶವಾವುದು ಎಂಬುವ ಜ್ಞಾನವೇ ಆ ವಯಸ್ಸಿನಲ್ಲಿ ಆಗಲಾರದಲ್ಲವೇ?

"ಒಂದು ರಾತ್ರಿ ನನ್ನ ತಾಯಿಯು ಆಕಳು ಕರಿಯಲು ಪೋಗುತ್ತಾ ದಾರಿಯಲ್ಲಿ ಹಾವನ್ನು ತುಳಿದಳು ಕಾಲಚೋದಿತವಾದ ಸರ್ಪವು ಆಕೆಯನ್ನು ಕಚ್ಚಿತು. ಅಚ್ಯುತನ ಇಚ್ಛೆಯಿಂದ ಇದ್ದೊಂದು ಬಂದವು ನಿವೃತ್ತವಾಗಲು ಆದದ್ದೆಲ್ಲಾ ಒಳಿತೆಂದು ಮಾಡತಕ್ಕ ಕರ್ಮಕಾಂಡವ ಮುಗಿಸಿ ಉತ್ತರದಿಕ್ಕಿಗೆ ಪ್ರಯಾಣ ಮಾಡಿದೆನು ಪುರಗ್ರಾಮಗಳನ್ನು ವನೋಪವನಗಳನ್ನು ದಾಟುತ್ತಾ ಒಂದರಣ್ಯವಂ ಪ್ರವೇಶಿಸಿದೆನು. ವಿಚಿತ್ರದಾತುಗಳ ಚಿತ್ರವರ್ಣಗಳ ಪರ್ವತಗಳನ್ನು ಗಜಬುಗ್ರ ವೃಕ್ಷಗಳನ್ನು ಸ್ವಾದು ಜಲಪೂರ್ಣ ಸರೋವರಗಳನ್ನು ಕಮಲ ಮನೋಹರ ನದಿಗಳನ್ನು ಕಲಕಲ ನಾದ ಮಾಡುವ ಪಕ್ಷಿಸಮೂಹವನ್ನು ಪುಷ್ಪಮಕರಂದ ಲುಬ್ದಬ್ರಮರ ಪಂಕ್ತಿಯನ್ನು ನೋಡುತ್ತಾ ಬಹುದೂರ ಪೋದೆ.

ಪರಿಶ್ರಾಂತನಾಗಿದ್ದೆ. ಹಸಿವು ಬಾಯಾರಿಕೆಗಳನ್ನು ಹಿಂಗಿಸಲು ಒಂದು ಸುಂದರ ಸರದಲ್ಲಿ ಸ್ನಾನಾದಿ ಕೃತ್ಯಗಳನ್ನು ನಿರ್ವಹಿಸಿ ಜಲಪಾನವನ್ನು ಮಾಡಿ ಆ ನಿರ್ಮನುಜಾರಣ್ಯದಲ್ಲಿ ಅಶ್ವತ್ಥವೃಕ್ಷವಂ ಕಂಡು ಅದರ ನೆರಳಿನಲ್ಲಿ ಕೂತೆ. ಮನಸ್ಸಿನಿಂದ ನನ್ನ ಅಂತರ್ಯಾಮಿಯಾದ ಶ್ರೀಹರಿಯ ಚಿಂತನವನ್ನು ನಾದುಗಳು ಪೇಳಿದಂತೆ ಮಾಡಿದೆ

"ಶ್ರೀಹರಿಯು ಜೀವನಿಗೆ ಸ್ವಪ್ನವನ್ನು ತನ್ನ ಇಚ್ಛೆಯಿಂದ ನೋಡಿಸುವನು. ಎಚ್ಚರಿಕೆಯನ್ನವನೇ ಕೊಡುವನು. ಗಾಡನಿದ್ರೆಯು ಅವನ ಇಚ್ಛೆಯಿಂದಲೇ ಬರುವದು ಜಾಗ್ರದವಸ್ಥೆಯಲ್ಲಿ ಆಗುವ ನಾಮಗಳು ರೂಪಗಳು ಕ್ರಿಯೆಗಳು ಎಲ್ಲದರ ಜ್ಞಾನವು ಅವನಿಂದಲೇ ಇಂತಹ ಜಗದ್ವಿಲಕ್ಷಣನಾದ ಶ್ರೀಹರಿಯು ಸರ್ವಜ್ಞನು, ಸರ್ವಾಂತರ್ಯಾಮಿಯು, ಪರಮಪ್ರಾಪ್ಯನೂ ಆಗಿರುವನು ಸರ್ವಾವಸ್ಥಾಪ್ರೇರಕನಾದ ಪ್ರಬುವಿಗೆ ಸ್ವಪ್ನವಿಲ್ಲ, ನಿದ್ರೆಯಿಲ್ಲ, ನಿದ್ರೆಯಿಂದೇಳುವುದೆಂಬುದೂ ಇಲ್ಲವೇ ಇಲ್ಲ ಭಗವಂತನ ಸ್ವರೂಪವು ಅಪ್ರಮೇಯವೂ ಅದ್ಭುತವೂ ಆಗಿದೆ ಜನನ ಮರಣಾದಿ ಸರ್ವದೋಷ ದೂರನಾದ ಶ್ರೀ ನಾರಾಯಣನು ಪ್ರಳಯಾಂತ್ಯದಲ್ಲಿ ಕ್ರೀಡಾಲೋಲನಾಗಿ ಜೀವಜಡಾತ್ಮಕ ಜಗತ್ತನ್ನು ನಿರ್ಮಿಸಿ, ಸಂರಕ್ಷಿಸಿ, ಕೊನೆಗೆ ಅದನ್ನು ಸಂಹರಿಸಿ, ಪ್ರಪಂಚವನ್ನೆಲ್ಲ ಪೊಟ್ಟೆಯಲ್ಲಿಟ್ಟು ಉದಾಸೀನನಂತೆ ಯೋಗನಿದ್ರೆಯಲ್ಲಿ ನಿರತನಾಗಿರುತ್ತಾನೆ. ಇಂತು ರಮಾಕಾಂತನ ಚರಣಾಂಬುರುಹಧ್ಯಾನದಿಂದ ಬಕ್ತಿಪೂರವುಕ್ಕೇರಿ ಬರಲು ಔತ್ಕಂರ್ಠ್ಯದಿಂದ ಬಾಷ್ಪಪೂರಿತ ನೇತ್ರನು, ಪುಲಕಾಂಕುರಿತ ಗಾತ್ರನೂ ಆದ ನನ್ನ ಹೃದಯ ಸೀಮೆಯಲ್ಲಿ ರಮಾಮನೋಹರನ ದಿವ್ಯಸುಂದರರೂಪವಂ ಕಂಡೆ. ಪ್ರೇಮಾತಿಬರದಿಂದ ಆನಂದ ಸಮುದ್ರಮಗ್ನನಾಗಿ ಮೈಮರೆತೆ. ಲೋಕವನ್ನೂ ಮರೆತೆ. ಕರುಣಾಪೂರ್ಣ! ಬಾದರಾಯಣ! ಏನು ಪೇಳಲಿ! ನಿರ್ಬಾಗ್ಯನಾದ ನನ್ನ ಮನೋನೇತ್ರಗಳಿಗೆ ಆ ಸುಂದರಸುಖಾವಹವಾದ ಬಗವಂತನ ಆನಂದಮೂರ್ತಿಯು ಕಾಣದೇ ಹೋಗಲು ಸಹಸಾ ಎದ್ದುನಿಂತೆ ಮೋಕ್ಷಸಾಮ್ರಾಜ್ಯವಂ ಪರಿತ್ಯಜಿಸಬಂದ ನಿಂದನೀಯನಂತೆ ದುಃಖದಿಂದ ಗೋವಿಂದಾ! ಮುಕುಂದಾ! ಇಂದಿರೇಶಾ! ಎಂದೆ ಮತ್ತೆ ನೋಡಬೇಕೆಂದೆ. ಮನಸ್ಸನ್ನು ಬುದ್ಧಿಯಲ್ಲಿಟ್ಟು ತೃಪ್ತನಾಗದೆ ಎಲ್ಲ ವಿಷಯಂಗಳಂ ಬಿಟ್ಟು ಎಷ್ಟು ಪ್ರಯತ್ನಿಸಿದರೂ ಶ್ರೀಹರಿಯ ಆ ಪರಮಮಂಗಳ ರೂಪವು ನನಗೆ ಮತ್ತೆ ಕಾಣಲಿಲ್ಲ

ಆಗ ವಿಜನಾರಣ್ಯದಲ್ಲಿ ಆಕಾಶವಾಣಿಯು ನನ್ನನ್ನುದ್ದೇಶಿಸಿ ಇಂತೆಂದಿತು. ಆ ಗಂಭೀರ ಮದುರ ವಾಣಿಯಿಂದ ನನ್ನ ಮನಃಕ್ಲೇಶವಡಗಿದಂತಾಗಲು ಕಿವಿಗೊಟ್ಟಾಲಿಸಿದೆ.

"ಬಾಲಕಾ! ಈ ಜನ್ಮದಿ ನನ್ನನ್ನು ನೀ ಮತ್ತೆ ಕಾಣಲಾಗದು. ಪಾಪಕಷಾಯವು ಪೂರ್ತಿಯಾಗಿ ಇಂಗಿಹೋಗದ ಕುಯೋಗಿಗಳು ನನ್ನನ್ನೆಂತು ಕಂಡಾರು` ನನ್ನ ರೂಪ ದರ್ಶನವಿಷಯಕಾಬಿಲಾಷೆ ಪುಟ್ಟಿಸಲು ಈಗ ಕಾಣಿಸಿದೆ. ವತ್ಸಾ! ನನ್ನ ಬಕ್ತನಾದ ನೀನಿನ್ನು ದನ್ಯನಾದೆ ಪ್ರಾಕೃತಕಾಮಗಳಿನ್ನು ನಿನ್ನನ್ನು ಪೀಡಿಸಲಾರವು ಪೋಗು, ಬಹುಕಾಲೀನವಾದ ಸಜ್ಜನಸೇವೆಯಿಂದ ನಿನಗೆ ನನ್ನಲ್ಲಿ ಮನನದಿಂದ ದೃಡಬಕ್ತಿಯು ಉಂಟಾಗಿದೆ ಈ

ಶೂದ್ರಶರೀರವನ್ನು ಕಾಲದಲ್ಲಿ ತ್ಯಜಿಸು ಬಾಗವತೋತ್ತಮನಾಗುವಿ. ನನ್ನಲ್ಲಿ ನಿಬದ್ಧವಾದ ನಿನ್ನ ಬುದ್ಧಿಯು ನಾಶವಾಗುವುದಿಲ್ಲ ಪ್ರಳಯಕಾಲಾನಂತರವು ನಿನಗೆ ನನ್ನ ಅನುಗ್ರಹ ದಿಂದ ಜಾತಿಸ್ಮರಣೆಯು ಇರಲಿ!" ಎಂದು ಪೇಳಿ ಜಡಶರೀರರಹಿತನು ಸರ್ವತ್ರ ಆಕಾಶ ದಂತೆ ವ್ಯಾಪ್ತನಾದ ಪ್ರಭುವು ಸುಮ್ಮನಾಗಲು ನಾನು ಆ ಸರ್ವೋತ್ತಮನಿಗೆ ಶಿರಸಾ ಬಾಗಿ ನಮಿಸಿದೆ. ಅವನ ದಯೆಗೆ ಪಾತ್ರನೆನಿಸಿದೆ. ಅಜ್ಞಾನಗಳಂ ತ್ಯಜಿಸಿದೆ ಮಂಗಳಕರ ನಾಮ ಗಳಂ ನಾಲಿಗೆಯಿಂದ ನುಡಿಸಿದೆ. ಅವನ ಲೀಲಾವೈಬವವಂ ಸ್ಮರಿಸುತ್ತಾ ಆಶೆಗಳಂ ಬಿಟ್ಟೆ ಮನಸಾ ಸಂತೋಷಪಟ್ಟೆ ಮಾತ್ಸರ್ಯಾದಿ ಮನೋಮಲಗಳನ್ನು ಸುಟ್ಟೆ. ಬಟ್ಟೆಗಳನ್ನು ಬಿಟ್ಟೆ. ಇಂತು ಕೃಷ್ಣನಲ್ಲೇ ರತವಾದ ಮತಿಯಿಂದ ಪಾಪರಹಿತನಾದೆನಗೆ ಮಿಂಚಿನಂತೆ ಸಹಸಾ ಮರಣಕಾಲವು ಬಂತು ಹರಿಸ್ಮರಣ ಶುದ್ಧನಾದ ನನ್ನ ಪ್ರಾರಬ್ಧಾವಸಾನವಾಗಲು ಪಾಂಚಭೌತಿಕ ದೇಹವು ಬಿದ್ದುಹೋಯಿತು ಆಗ ಪ್ರಳಯಕಾಲವಾಯಿತು ತ್ರೈಲೋಕ್ಯ ವನ್ನುಪಸಂಹರಿಸಿ ತನ್ನುದರದಲ್ಲಿಟ್ಟು ಶೇಷಶಯ್ಯೆಯಲ್ಲಿ ಪ್ರಳಯೋದಧಿಯಲ್ಲಿ ನಿದ್ರಿಸಿದ ಹರಿಯ ಉದರದಲ್ಲಿ ನಿದ್ರೆ ಮಾಡಲಿಚ್ಛಿಸಿದ ವಿರಿಂಚನನಿಶ್ವಾಸದಿಂದ ಕೂಡಿ ಪ್ರವೇಶಿಸಿದೆ ಪ್ರಳಯದ ಸಾವಿರಮಹಾಯುಗಗಳಾದವು ಹರಿಯ ದೆಶೆಯಿಂದೆದ್ದು ವಿರಿಂಚನು ಈ ಜಗವನ್ನು ನಿರ್ಮಾಣಮಾಡಲಿಚ್ಛಿಸಿದಾಗ ಆತನ ಅಂಗಗಳಿಂದ ಮರೀಚ ಮುಖ್ಯಮುನಿಗಳು ಪುಟ್ಟಿದರು. ನಾನೂ ಉತ್ಸಂಗದಿಂದ ಜನಿಸಿದೆ. ಅಖಂಡಬ್ರಹ್ಮಚರ್ಯನಾಗಿ ನಾನು ಮೂರು ಲೋಕಗಳಲ್ಲಿಯೂ ಹೊರಗೂ ಶ್ರೀಮಹಾವಿಷ್ಣುವಿನ ಅನುಗ್ರಹದಿಂದ ಆತಂಕವಿಲ್ಲದೆ ಸಂಚರಿಸುವೆನು. ದೇವದತ್ತವಾದೀವೀಣೆಯಲ್ಲಿ ಸಪ್ತಸ್ವರಗಳು ತಾವಾಗಿಯೇ ಮೊಳಗು ವವು. ಈ ವೀಣಾಲಾಪನವಂ ಮಾಡುತ್ತಾ ಹರಿಕದೆಯಂ ಗಾನಮಾಡುತ್ತಾ ಮೈಮರೆತಾಗ ತೀರ್ದಪಾದನಾದ ಶ್ರೀಹರಿಯು ಪ್ರೀತಿಯಿಂದ ನನ್ನ ಚಿತ್ತದಲ್ಲಿ ಕರೆಯಲ್ಪಟ್ಟವನಂತೆ ಬಂದು ನಿಂದು ಆನಂದಪ್ರದನಾಗುವನು

ವಿಷಯಾಭಿಲಾಷೆಯಿಂದ ಕೆಟ್ಟು ದುಃಖಪಡುತ್ತಿರುವವರು ಘೋರಸಂಸಾರವಾರ್ದಿ ಯನ್ನು ದಾಟಲು ಹರಿಚರ್ಯಾನುವರ್ಣನವೇ ನಾವೆಯಾಗಿದೆ ಯಮನಿಯಮಗಳಿಂದ ಮನಸ್ಸು ಸ್ವಾದೀನವಾಗುವುದು ನಿಜ ಆದರೆ ಕಾಮಲೋಭಾದಿಗಳಿಂದ ಅದು ಪುನಃ ವಕ್ರಮಾರ್ಗವನ್ನೇ ಹಿಡಿಯುವದು ಮುಕುಂದ ಸುಂದರ ಕದಾಶ್ರವಣಾದಿಗಳಿಂದ ಕ್ರಮವಾಗಿ ಮನಸ್ಸಿಗೆ ಶಾಂತಿ ಸಿಕ್ಕಂತೆ, ಮತ್ತಿನ್ನಾವುದರಿಂದಲೂ ಸಿಗಲಾರದು. ನನ್ನ ಜನ್ಮಕರ್ಮ ರಹಸ್ಯಂಗಳನ್ನು ನೀನು ಕೇಳಲು ಸರ್ವಜ್ಞನಾದ ನೀ ಪ್ರೀತನಾದರೆ ಸಾಕೆಂದು ವರ್ಣಿಸಿದೆ. ಮುನಿವರ್ಯಾ! ಹರಿಚರ್ಯೆಯನ್ನು ಸಮಾಧಿಭಾಷೆಯಿಂದ ವಿಸ್ತಾರಮಾಗಿ ವರ್ಣಿಸಿ ಸುಜನರನ್ನೆಲ್ಲ ಸಲಹು" ಎಂದು ಹೇಳಿ ಪೂಜ್ಯನಾದ ನಾರದನು ವ್ಯಾಸನನ್ನು ಬೀಳ್ಕೊಟ್ಟು ವೀಣೆಯಂ ನುಡಿಸುತ್ತಾ ಹರೀಚ್ಛೆಯಂತೆ ಬೇಕಾದೆಡೆಗೆ ಹೊರಟುಹೋದನು. ಹೇ ಶೌನಕ! ಆ ನಾರದನೆಂತಹ ದನ್ಯನು! ವೀಣೆಯನ್ನು ಮೀಟುತ್ತಾ, ಶ್ರೀಹರಿಯನ್ನು ಗಾನದಿಂ ಪೊಗಳುತ್ತಾ, ಮಧುರಾತಿಮದುರವಾದ ಸ್ವಾಮಿಯ ಕೀರ್ತಿಚಂದ್ರಿಕೆಯನ್ನು ಲೋಕವೆಲ್ಲ

ಹರಡುತ್ತಾ ಸಂಸಾರಕ್ಲಿಶ್ಯಮಾನ ಜನರನ್ನು ಸುಖಪಡಿಸುವನು! ದೇವರ್ಷಿವರ್ಯಾ! ನಿನಗೆ ನಮಸ್ಕಾರವು

## ೭ ಅಶ್ವತ್ಥಾಮನ ಸ್ವಪ್ನ

ಶೌನಕನಾಗ ಸೂತನಂ ಕಂಡು "ನಾರದನ ವಿಜ್ಞಪ್ತಿಯನ್ನು ಲಾಲಿಸಿ ಬಗವಂತನಾದ ಬಾದರಾಯಣನೇನು ಮಾಡಿದನು?" ಎನ್ನಲು ಸೂತನು ವೇಳಿದನು

ಶೌನಕಾದಿಗಳೇ! ಬ್ರಹ್ಮದೈವತ್ಯವಾದ ಸರಸ್ವತೀ ನದಿಯ ವಶ್ಚಿಮತೀರದಲ್ಲಿ ಋಷಿಗಳ ಸತ್ರಯಾಗ ವಲಾತಿಶಯತ್ವಕಾರಣವಾದ ಬದರೀಷಂಡಮಂಡಿತವಾದ ಶಮ್ಯಾ ವ್ರಾಸವೆಂಬುವ ವ್ರಸಿದ್ಧ ತವೋವನವಿದೆ. ಅದು ವ್ಯಾಸರ ಆಶ್ರಮವು. ನಾರದನು ವೋದ ಮೇಲೆ ಶ್ರೀ ವೇದವ್ಯಾಸನಲ್ಲಿ ನಿತ್ಯಸಂದ್ಯಾದಿಗಳಂ ಮಾಡಿ ಕೂತು ದೀರ್ಘಕಾಲವಾಲೋಚಿಸಿ ಇಂತು ನಿಶ್ಚಯಿಸಿದನು.

"ಸಜ್ಜನರು ರಾಗಾದಿ ದೋಷಗಳಂ ಬಿಟ್ಟು ಶುದ್ಧಾಂತಃಕರಣರಾಗಿ ದ್ಯಾನಿಸುವ ದೇಶ ಕಾಲಗುಣಗಳಿಂದ ವೂರ್ಣನಾದ ಶ್ರೀಹರಿಯನ್ನೂ, ಜೀವಸಂಸಾರಕಾರಿಣಿಯಾದ ಅವನ ಮಾಯೆಯಂದು ಖ್ಯಾತವಾದ ಬಂದಕಶಕ್ತಿಯನ್ನೂ ಕಂಡೆನು. ಈ ಮಾಯೆ ಯಿಂದಲೇ ಜೀವನು ತಾನು ತ್ರಿಗುಣಾತ್ಮಕನಲ್ಲದಿದ್ದರೂ ದೇಹಾಬಿಮಾನದಿಂದ ಗುಣಬದ್ಧ ನಾಗಿ, ಅಹಂಕಾರ ಮಮಕಾರಗಳಿಗೆ ವಶನಾಗುತ್ತಾನೆ. ಅದರಿಂದ ಜನನ ಮರಣಾದಿರೂಪ ಸಂಸಾರದಲ್ಲಿ ನರಳುತ್ತಿರುವನು. ಅದೋಕ್ಷಜನಲ್ಲಿ ಮಾಡಿದ ಬಕ್ತಿಯೊಂದರಿಂದಲ್ಲದೆ ಈ ಅನರ್ಥವು ನಶಿಸದು. ಬಂದಕಶಕ್ತಿಯಿಂದಲಾದ ಸಂಸಾರವು ಆ ಶ್ರೀಹರಿಯ ವ್ರಸಾದ ದಿಂದಲೇ ನಿವೃತ್ತವಾಗುವದು ಇದು ಲೋಕದ ಜನರಿಗೆ ಗೊತ್ತಿಲ್ಲ"ವೆಂದು ಚಿಂತಿಸಿ ಸರ್ವಜ್ಞನಾದ ವ್ಯಾಸನು ಕರುಣೆಯಿಂದ ಯಾವ ಸಂಹಿತೆಯಂ ಕೇಳುವದರಿಂದ ಕೃಷ್ಣಬಕ್ತಿ ವುಟ್ಟುವದೋ ಯಾವ ಸಂಹಿತೆಯ ಶ್ರವಣಾದಿ ವಲವು ಶೋಕ ಮೋಹ ಬಯಾದಿ ನಾಶರಹಿತ ವಿರಕ್ತಿಯೋ ಅಂತಹ ಕ್ಷೇಮಂಕರವಾದ ಬಾಗವತವನ್ನು ರಚಿಸಿ, ಶೋದಿಸಿ, ವುತ್ರನಾದ, ವಿಷಯವಿದೂರನಾದ, ಶುಕನಿಗೆ ಕಲಿಸಿದನು ಎಂದು ಸೂತನು ವೇಳಲು ಶೌನಕನು ವ್ರಶ್ನಿಸಿದನು—

"ಸೂತಾ! ಧನಶಿಷ್ಯಾದಿ ಸಂಗ್ರಹಣಾವೇಕ್ಷೆಯಿಲ್ಲದ ನಿವೃತ್ತಿನಿರತನಾದ ಶುಕನು ಈ ದೊಡ್ಡ ಗ್ರಂಧವನ್ನೋದಿದನು ಎಂದೆ. ಅಂತಹವನಿಗದರಿಂದ ಏನು ವ್ರಯೋಜನ? ಅವನೇತಕ್ಕೆ ಓದಿದನು?" ಎನ್ನಲು ಸೂತನುತ್ತರಿಸಿದನು

ನಿಜ ಶುಕನಾತ್ಮಾರಾಮನು, ಬಾಹ್ಯವಿಷಯಾವೇಕ್ಷೆ ಅವನಿಗಿಲ್ಲ ನಿರವೇಕ್ಷರಾದ ಮುಕ್ತಜನ ಮನೋವಶೀಕರಣಕ್ಷಮನಲ್ಲವೇ ಶ್ರೀಹರಿಯು! ಇನ್ನು ಅಮುಕ್ತರ ವಿಷಯ ವೇಳಬೇಕೇ? ಸ್ವರೂಪಾನಂದಕ್ಕೆಂದೇ ಗೋವಿಂದ ಸುಂದರ ಕದಾ ಸುದಾಪಾನವನ್ನವರು ಮಾಡುವರು-ಮಾಡಿಸುವರು. ಇದವರ ಸ್ವಬಾವವು. ಶ್ರೀಹರಿಯೇ ಅಂತಹನು! ಹರಿಯ

ಜ್ಞಾನಾನಂದ ಸೌಂದರ್ಯೌದಾರ್ಯಾದಿ ಕಲ್ಯಾಣಗುಣಗಳಿಂದಾಕರ್ಷಿತಚಿತ್ತನಾಗಿ ಶುಕನು ನಿತ್ಯವೂ ವಿಷ್ಣುಜನಪ್ರಿಯವಾಗಿದೆ ಎಂದು ಈ ದೊಡ್ಡಗ್ರಂದವನ್ನು ಅದ್ಯಯನ ಮಾಡಿದನು ಸಾವಿರ ನಿಗಮಗಳ್ಳೋದಲು ಸುಲಬವಾಗದ ಮುಕ್ತಿಸುಬಗತ್ವವು ಬಾಗವತ ನಿಗಮದಿಂದ ಕಡುಬೇಗ ಕೈಸೇರುವದು

ಇನ್ನು ರಾಜರ್ಷಿಯಾದ ಪರೀಕ್ಷಿತನ ಜನ್ಮಕರ್ಮಗಳನ್ನೂ ಮರಣವನ್ನೂ ಹಾಗೂ ಪಾಂಡವರ ಸ್ವರ್ಗಾರೋಹಣಾದಿ ಪವಿತ್ರ ಚರಿತ್ರವನ್ನೂ ಹೇಳುವೆನು ಕೃಷ್ಣಕದೆಯಂ ಬಿಟ್ಟು ಬಕ್ತರ ಕದೆಯುಂಟೇ?

ಕೌರವ ಪಾಂಡವರ ಯುದ್ದವು ಮುಗಿಯಿತು ಬಹುವೀರರು ವೀರಸ್ವರ್ಗವನ್ನೈದಿದರು ಬೀಮಸೇನ ಗದಾದಂಡದಿಂದ ತುಂಡರಿಸಲ್ಪಟ್ಟ ಊರುದಂಡದಿಂದ ಮರಣೋನ್ಮುಖನಾದ ಕೌರವರಾಜನು ಪ್ರೀತನಾಗಲೆಂದು ಗುರುಪುತ್ರನಾದ ಅಶ್ವತ್ಥಾಮನು ದ್ರೌಪದೀ ಪುತ್ರರು ಶಿಬಿರದಲ್ಲಿ ಮಲಗಿರುವಾಗ ಅವರ ಶಿರಸ್ಸುಗಳ ಕತ್ತರಿಸಿ ಕೈಯಲ್ಲಿ ಪಿಡಿದುತಂದು ಕೌರವನಿಗೆ ನೋಡಿಸಲು ಆ ಪಾಪಿಯು ಸಂತಸಿದನು. ಮತ್ತು 'ಬೂಮಂಡಲವು ನಿಷ್ಪಾಂಡವ ಹಾಗಬೇಕು ತನ್ನ ಪತ್ನಿ ಬಾನುಮತಿಯಲ್ಲಿ ಪುತ್ರಾದಾನ ಮಾಡಿ ಕೌರವವಂಶವನ್ನು ಪುನಃ ಸ್ಥಾಪಿಸಬೇಕೆಂದು' ಅಶ್ವತ್ಥಾಮನನ್ನು ಕೇಳಿಕೊಂಡು ಪ್ರಾಣಪರಿತ್ಯಾಗ ಮಾಡಿದನು ಮೊದಲನೆಯ ವರದಾನವಂ ಮಾಡಬೇಕೆಂದು ಶಿಶುಹತ್ಯಾಬಿಲಾಷಿಯಾದ ಅಶ್ವತ್ಥಾಮನು ಸ್ವಲ್ಪ ಸಮಾದಾನದಿಂದ ನಿದ್ರೆ ಹತ್ತಲು ಮಲಗಿದನು ಆತನು ಆಗ ಕಂಡ ಸ್ವಪ್ನ ವೃತ್ತಾಂತವನ್ನು ಪೇಳುವೆನು ಕೇಳು

ಶಿಶುಮಾತೆ ದ್ರೌಪದಿ ತನ್ನ ಸುತರ ಘೋರಹತ್ಯೆಯನ್ನು ಕಂಡು ರೋದಿಸುತ್ತಿರಲು ಅರ್ಜುನನಾತರುಣಿಯನ್ನು ಸಮಾಧಾನಪಡಿಸುತ್ತಿಂತೆಂದನು "ಮಾನಿನಿ! ಅಳಬೇಡ ಅಕೃತ್ಯವನ್ನು ಮಾಡಿದ ಬ್ರಾಹ್ಮಣಾದಮನನ್ನು ಗಾಂಡೀವಯುಕ್ತ ಬಾಣಗಳಿಂದ ಕೊಂದು ಅವನ ತಲೆಯನ್ನು ತರುವೆನು ಪಾದದಿಂದದನು ಒದೆದು ಆಮೇಲೆ ಸ್ನಾನ ಮಾಡುವಿಯಂತೆ!" ಎಂದು ಪ್ರಿಯಳನ್ನು ಮನೋಹರವಚನಗಳಿಂದ ಸಾಂತ್ವನಗೊಳಿಸಿ, ಕೃಷ್ಣನಾರಥಿಯಾಗಿ ಕಪಿಧ್ವಜವಾದ ರಥವನ್ನೇರಿ ಗಾಂಡೀವ ಟಂಕಾರವನ್ನು ಮಾಡುತ್ತ ಗುರುಪುತ್ರನನ್ನು ಪಿಡಿದು ಕೊಲ್ಲಬೇಕೆಂದು ಬೆನ್ನಟ್ಟಿ ಬಂದನು ಅದನ್ನು ನೋಡಿ ಶಿಶುಹಂತನಾದ ಅಶ್ವತ್ಥಾಮನು ಭೀತಿಯಿಂದ ಸಂಭ್ರಾಂತನಾಗಿ ಪ್ರಾಣವನ್ನುಳಿಸಿಕೊಳ್ಳಲು ಹಿಂದೆ ರುದ್ರನ ತೃತೀಯನೇತ್ರಾಗ್ನಿಯ ಭಯದಿಂದ ಓಡಿದ ಶನೈಶ್ಚರನಂತೆ ರದದಲ್ಲಿ ಕೂತು ಓಡಿದನು ಅವನ ವಾಹನಗಳು ಶ್ರಾಂತವಾಗಿ ಓಡದಾದವು. ಗುರುಸುತನಾಗ ದಿಕ್ಕುತೋಚದೆ ತನ್ನ ಪ್ರಾಣರಕ್ಷಣೆಗೆಂದು ಬ್ರಹ್ಮಶಿರೋನಾಮಕಾಸ್ತ್ರವನ್ನು ಪ್ರಯೋಗಿಸಿದನು ಅದರ ಉಪಸಂಹಾರವವನಿಗೆ ಗೊತ್ತಿಲ್ಲದಿದ್ದರೂ ಪ್ರಾಣಸಂಕಟದಿಂದ ಪಾರಾಗಲು ಬ್ರಹ್ಮಾಸ್ತ್ರವಂ ಬಿಡಲಾದುಷ್ಕರತೇಜವೆಲ್ಲ ದಿಕ್ಕಿನಲ್ಲಿ ತುಂಬಿ ಸುಡುತ್ತಾ ಬಂತು ಅದನ್ನು ಕಂಡು ಗಾಂಡೀವಿಯು ಪುಂಡರೀಕಾಕ್ಷನನ್ನು ಕೇಳಿದನು.

ಕೃಷ್ಣ ಕೃಷ್ಣಾ! ಬಕ್ತರಕ್ಷಕನೆ! ಸಂಸಾರದ ದುಃಖರಾಶಿಯನ್ನು ನಾಶಮಾಡಿ ತಾಪವನ್ನು ದೂರಮಾಡಲು ನೀನೇ ಹೊರತು ಅನ್ಯರಿಲ್ಲ. ಪಾಪವನ್ನು ಕಳೆದು ಜ್ಞಾನವನ್ನು ಕೊಡುವವನು ನೀನೇ! ಸರ್ವಜ್ಞನಾದ ನೀನು ಅನನ್ಯಾಶ್ರಿತನಾಗಿರುವೆ. ಲಕ್ಷ್ಮೀರಮಣ! ಜೀವರನ್ನು ಸಂಸಾರದಲ್ಲಿ ಸೆಳೆವ ಬಂದಕಶಕ್ತಿಯು ನಿನ್ನನ್ನೇನೂ ಮಾಡಲಾರದು ನಿನ್ನದೀನವಾದ ಈ ಮಾಯೆಯಿಂದ ಬಂದನದಲ್ಲಿ ಬಂದು ನೊಂದ ಜೀವರಿಗೆ ನಿನ್ನ ಜ್ಞಾನರೂಪ ಶ್ರೇಯಸ್ಸಾಗಲೆಂದು ನಿನ್ನ ಇಚ್ಛೆಯಿಂದ ಅವತರಿಸಿದೆ ಸರ್ವೇಶ್ವರಾ! ಭೂಬಾರಹರಣದಂತೆ ಸ್ವಜನರಕ್ಷಣವೂ ನಿನ್ನದೇ ಆಗಿದೆ. ಸ್ವಾಮೀ! ಏನಿದೀ ಬಯಂಕರ ವಾದ ತೇಜವು? ಎಲ್ಲಿಂದ ಬಂತು? ಸರ್ವತೋಮುಖವಾಗಿ ಸುಡುತ್ತಾ ಬರುವ ಪರಮ ದಾರುಣವಾದ ಇದೇನು?

ಎನ್ನಲು ಕೃಷ್ಣನು "ಅರ್ಜುನಾ! ಇದು ದ್ರೋಣಪುತ್ರನ ಬ್ರಹ್ಮಶಿರವೆಂಬ ಅಸ್ತ್ರದ ತೇಜವು. ಉಪಸಂಹಾರ ಗೊತ್ತಿಲ್ಲದೆಯು ಪ್ರಾಣರಕ್ಷಣೆಗೋಸುಗ ಅಶ್ವತ್ಥಾಮನಿದನ್ನು ಬಿಟ್ಟಿರುವನು. ಬ್ರಹ್ಮಾಸ್ತ್ರವಂ ಬಿಟ್ಟು ಬೇರೆ ಪ್ರತೀಕಾರವಿಲ್ಲ. ನೀನೂ ಬ್ರಹ್ಮಾಸ್ತ್ರವನ್ನೇ ಬಿಡು ಆ ತೇಜವನ್ನು ಸುಡು" ಎಂದನು.

ಪರವೀರ ವೈರಿಯಾದ ಅರ್ಜುನನು ಹರಿಗೆ ಪ್ರದಕ್ಷಿಣ ನಮಸ್ಕಾರಗಳನ್ನಾಚರಿಸಿ ಭಗವಂತನ ಮಾತಿನಂತೆ ಆ ಬ್ರಹ್ಮಾಸ್ತ್ರದ ಶಾಂತಿಗೆಂದು ತನ್ನ ಬ್ರಹ್ಮಾಸ್ತ್ರವನ್ನು ಪ್ರಯೋ ಗಿಸಿದನು.

ಅವೆರಡು ಬ್ರಹ್ಮಾಸ್ತ್ರಗಳಾಗ ಸೂರ್ಯಪಾವಕರಂತೆ ಸುಡುತ್ತಾ ಆಕಾಶಾದಿ ತುಂಬಿ ಮೂರು ಲೋಕಗಳನ್ನು ತಾಪಗೊಳಿಸಲು ಪ್ರಜರು ಪ್ರಳಯವೆ ಆಗುವದೇನೋ ಎಂದು ಶಂಕಿಸಿದರು ಪ್ರಜೋಪದ್ರವವನ್ನೂ ಲೋಕನಾಶವನ್ನೂ ಕಂಡು ಕೃಷ್ಣನಾಜ್ಞಾಪಿಸಲು ಅರ್ಜುನನು ಆ ಅಸ್ತ್ರಗಳೆರಡನ್ನೂ ಉಪಸಂಹಾರ ಮಾಡಿ ಶಾಂತಿಗೊಳಿಸಿದನು

ಅರ್ಜುನನಾಗ ವೇಗವಾಗಿ ಓಡಿ ದಾರುಣನಾದ ಅಶ್ವತ್ಥಾಮನನ್ನು ಪಿಡಿದು ಪಶುವಿನನ್ನು ಹಗ್ಗದಿಂದ ಕಟ್ಟಿದಂತೆ ಕಟ್ಟಿ ರದದಲ್ಲಿಟ್ಟು ಶಿಬಿರಕ್ಕೆ ಬರುವಾಗ ಕೃಷ್ಣನು ಕುಪಿತನಾಗಿ "ಅರ್ಜುನಾ! ಇವನನ್ನು ಬಿಡಬೇಡ. ರಾತ್ರಿಯಲ್ಲಿ ಮಲಗಿದ್ದ ನಿರಪರಾದಿ ಗಳಾದ ಬಾಲರನ್ನು ಕೊಂದ ಈ ಬ್ರಾಹ್ಮಣಾದಮನು ವದಾರ್ಹನೇ ಸರಿ! ಮದ್ಯಪಾನದಿಂದ ಮತ್ತನಾದವನಂ, ಮರೆತು ನಿಂತವನಂ, ಪಿಶಾಚಪೀಡಿತನಂ, ಮಲಗಿದನಂ, ಬಾಲನಂ, ತರುಣಿಯಂ, ಶರಣಾಗತನಂ, ವಿರದನಂ, ಬೀತನಾದ ಶತ್ರುವಿನಂ ದರ್ಮಜ್ಞನೆಂದಿಗೂ ಕೊಲ್ಲಲಾರನು ದಯೆಯಿಲ್ಲದೆ ಇಂದ್ರಿಯಾರಾಮನಾಗಿ ತನ್ನ ಪ್ರಾಣವನ್ನುಳಿಸಿಕೊಳ್ಳ ಲೋಸುಗ ಪರಪ್ರಾಣಗಳ ತೆಗೆಯುವವನನ್ನು ಕೊಲ್ಲುವುದೇ ಅವನಿಗೆ ಶ್ರೇಯಸ್ಸೆನಿಸುವದು ರಾಜದಂಡದಿಂದ ಪಾಪಿಗಳು ತಮ್ಮ ಪಾಪಗಳನ್ನಿಲ್ಲೇ ನೀಗಿ ಮುಂದೆ ನರಕಾದ್ಯನರ್ದಗಳಿಗೆ ಗುರಿಯಾಗದಿರುವರೆಂದು ಮನುಸ್ಮೃತಿಯಲ್ಲಿ ಹೇಳಿದೆ ಕೊಲ್ಲಿವನನ್ನು! ದ್ರೌಪದೀದೇವಿಗೆ ಇವನ ಶಿರಸ್ಸನ್ನು ತರುವೆನೆಂದು ನೀ ಕೊಟ್ಟ ಮಾತನ್ನು ಸತ್ಯ ಮಾಡು ಆತತಾಯಿಯು ಪುತ್ರಹಂತಕನಾದ ಈ ಕುಲಪಾಂಸನನನ್ನು, ಪ್ರಯೋಜನವಿಲ್ಲದೆ ಹೋದದ್ದರಿಂದ

ದುರ್ಯೋಧನನಿಗೂ ಅನಿಷ್ಟಕರವಾದ ಶಿಶುಹತ್ಯೆಯ ಮಾಡಿದ ಈ ಪಾಪಿಯನ್ನು ಸಂಹರಿಸು" ಎಂದನು. ಇಂತು ದರ್ಮಪರೀಕ್ಷೆಗೆಂದು ನುಡಿದ ಗೋವಿಂದನ ಮಾತನ್ನು ಕೇಳಿ ಪಾರ್ದನು ಗುರುಸುತನನ್ನು ಕೊಲ್ಲದೆ ಶಿಬಿರಕ್ಕೆ ಕರೆತಂದು ದ್ರೌಪದಿಯ ಮುಂದೆ ನಿಲ್ಲಿಸಿದನು ಪಶುವಿನಂತೆ ಬದ್ದನಾಗಿ, ತಲೆಬಾಗಿ ನಿಂತು ತಾ ಮಾಡಿದ ಅಮಾನುಷಕೃತ್ಯ ದಿಂದ ಲಜ್ಜಿತನಾದ ಗುರುಸುತನನ್ನು ಕಂಡು ಕೃಷ್ಣೆ ಕೃಪಾನ್ವಿತಳಾಗಿ ಕೃಪೀಪುತ್ರನಿಗೆ ನಮಸ್ಕರಿಸಿ ಇಂತೆಂದಳು "ಬಿಡಿ ಬಿಡಿ ಇವನು ಬ್ರಾಹ್ಮಣನು, ನಮಗೆಲ್ಲಾ ಗುರುತುಲ್ಯನು ಉಪಕ್ರಮೋಪಸಂಹಾರಸಹಿತವಾಗಿ ದನುರ್ವೇದವನ್ನು ಯಾರ ಅನುಗ್ರಹದಿಂದ ಕಲಿತಿರೋ ಆ ಪೂಜ್ಯರಾದ ದ್ರೋಣಾಚಾರ್ಯರೇ ಇಲ್ಲಿ ಪುತ್ರರೂಪದಿಂದ ನಿಂತಿರುವರು. ಸಹಗಮನ ಮಾಡದೆ ಇವನ ತಾಯಿಯಾದ ಕೃಪಿಯು ಇರುವಳವಳಿಗೋಸ್ಕರಮಾದರೂ ಇವನನ್ನು ಬಿಟ್ಟುಬಿಡಿ. ಗುರುವಂಶವೇ ಪೂಜ್ಯವು, ವಂದ್ಯವಾಗಿರುವುದು. ದರ್ಮಜ್ಞರಾದ ನಾಪದಕ್ಕಪ ಚಾರಗೈಯಲಾಗದು. ಅಶ್ರುಮುಖಿಯಾಗಿ ಶಿಶುಗಳಂ ನೆನೆನೆನೆದು ಕರುಪಂ ಕಳೆದುಕೊಂಡ ಆಕಳಂತೆ ನಾನಳುತ್ತಿರಪೆನಿಂತಹ ಪುತ್ರಶೋಕಪಾಪತಿದೇಪತೆಯಾದ ಆಚಾರ್ಯಾಣಿ ಕೃಪೀದೇವಿಗಾಗದಿರಲಿ! ರಾಜನ್ಯರು ದುಷ್ಟಮನಸ್ಕರಾಗಿ ಬ್ರಾಹ್ಮಣದ್ರೋಹಪಂ ಬಗೆದೊಡೆ ಸಮೂಲವಾಗಿ ಅಂತಹರ ಕುಲವೇ ನಾಶವಾಗುವದು" ಎಂದಳು.

ಧರ್ಮಸಂಮತವು, ನ್ಯಾಯವು, ಕರುಣಾರಸಾಕ್ತವು, ಶಾಸ್ತ್ರಯುಕ್ತವು, ನಿಷ್ಪಕ್ಷ ಪಾತವು, ಪ್ರಶಂಸಾಪಾತ್ರವೂ ಆದ ಪಾಂಚಾಲಿಯ ವಚನಗಳ ಕೇಳಿ ದರ್ಮರಾಜನು ಅಬಿ ನಂದಿಸಿದನು. ಬ್ರಾಹ್ಮಣರೇ! ನಕುಲ ಸಹದೇವ ಸಾತ್ಯಕಿ ಧನಂಜಯರೂ ಬಗವಂತನಾದ ಶ್ರೀಕೃಷ್ಣನೂ ಸಮ್ಮತಿಸಿದರು ಆದರೆ ಬೀಮಸೇನನೊಪ್ಪದೆ ಕುಪಿತನಾಗಿ ಇಂತೆಂದನು, "ಶಿಶುಹತ್ಯೆಯನ್ನು ಮಾಡಿದ ಈ ಪಾಪಿಯ ಕುಕೃತ್ಯದಿಂದ ಯಾರಿಗೇನು ಪ್ರಯೋಜನ ವಾಯಿತು? ಇವನನ್ನು ಕೊಲ್ಲುವುದರಿಂದ ಇವನಿಗೆ ಮುಂದೆ ನರಕಬಾದೆ ತಪ್ಪುವುದು ನಮಗೂ ಪಾಪವಿಲ್ಲ, ಕೊಲ್ಲಿ" ಎನಲಾಗಿ ಶ್ರೀಕೃಷ್ಣನು ಮಂದಹಾಸಪಂ ಮಾಡಿ ಅರ್ಜುನನಂ ನೋಡಿ, "ಅರ್ಜುನಾ! ಬ್ರಾಹ್ಮಣನಂ ಕೊಲ್ಲಲಾಗದು, ಆತತಾಯಿಯಂ ಬಿಡಬಾರದು, ಈ ಧರ್ಮಗಳೆರಡೂ ಎನಗೆ ಸಮ್ಮತವೇ ಆಗಿವೆ ನೀನಾದರೋ ಪಾಂಚಾಲಿಗೆ ಕೊಲ್ಲುವೆನೆಂದು ಮಾತು ಕೊಟ್ಟಿರುವೆ ಅವಳಿಗೂ, ನನಗೂ, ಬೀಮಸೇನ ನಿಗೂ ಸಮ್ಮತವಾಗುವಂತೆ ಮಾಡು" ಎಂದನು ಹರಿಯ ಹಾರ್ದವನ್ನರಿತು ಪಾರ್ದನು ತಕ್ಷಣವೇ ತೀಕ್ಷ್ಣವಾದ ಕರವಾಲದಿಂದ ಅಶ್ವತ್ಥಾಮನ ಸಹಜವಾದ ಶಿರೋಮಣಿಯಂ ಶಿರೋಜಗಳಿಂದ ಸಹಿತಮಾಗಿ ಕತ್ತರಿಸಿ ತೆಗೆದು, ಅವನಂ ಬಿಚ್ಚಿ ಶಿಬಿರದಿಂದ ಹೊರ ಹಾಕಿದನು. ಬಾಲಹತ್ಯಾ ಹತಪ್ರಬನಾದ ಅಶ್ವತ್ಥಾಮನು ಮಣಿಯನ್ನೂ ತೇಜಸ್ಸನ್ನೂ ಕಳೆದುಕೊಂಡು ಖಿನ್ನವಾಗಿ ಹೊರಟುಹೋದನು ಬ್ರಾಹ್ಮಣರಿಗೆ ಬಂಧನ, ದ್ರವ್ಯಾಪಹಾರ, ಸ್ಥಾನಚ್ಯುತಿ ಇವುಗಳೇ ಮರಣದಂಡಗಳೆನಿಸಿವೆ ಏಕೆಂದರೆ 'ಬ್ರಾಹ್ಮಣನೋ ನ ಹಂತವ್ಯಃ' ಎಂದು ವೇದವಿದೆ ಇಂತು ಸ್ವಪ್ನವನ್ನು ಕಂಡ ಗುರುಸುತನು ಕಂದರಂ ಕೊಂದು ಭೀಮನ ಕೈಗೆ ಸಿಕ್ಕು ಮಣಿಯಂ ಕಳೆದುಕೊಂಡು ಹೋದನು.

## ೮. ಪರೀಕ್ಷಿತನ ರಕ್ಷಣೆ

ಅನಂತರ ಪಾಂಡವರು ಪಾಂಚಾಲೀಸಹಿತರಾಗಿ ಪುತ್ರರನ್ನು ನೆನೆದು ದುಃಖಿಸಿ ಮೃತರಾದವರಿಗೆಲ್ಲ ದಹನಾದಿ ಪಾರಲೌಕಿಕ ಕೃತ್ಯಗಳನ್ನು ಮಾಡಿದರು. ಶ್ರೀಕೃಷ್ಣನು ಹಿಂದೆ ವನವಾಸ ಸಮಯದಲ್ಲಿ ತನ್ನ ಪಾದಪಂಕಜವಂ ಪಿಡಿದು ರೋದಿಸಿದ ದ್ರೌಪದಿಗೆ ತಾ ಕೊಟ್ಟ ವಚನವಂ ಸತ್ಯವಾಗಿಸಲು ರಣಭೂಮಿಯಲ್ಲಿ ಮುಕ್ತಕೇಶಬಂದರಾಗಿ ಪಾಂಚಾಲೀ ಕಬರೀವಿಕರ್ಷಣ ಮಹಾಪಾಪ ಕ್ಷತಾಯುಷ್ಕರಾದ ಬೀಮಗದಾದಂಡಬಗ್ನೋರುವಕ್ಷಸ್ಕ ರಾದ ತಮ್ಮ ತಮ್ಮ ಪತಿಶವಂಗಳನ್ನಾಲಿಂಗಿಸಿ ರೋದಿಸುವ ಕೌರವ ವನಿತೆಯರನ್ನು ನೋಡಿಸಿ ಸಂತೈಸಿದನು

ಪಾಂಡವರು ಹರಿಪಾದಾರವಿಂದರಜಃಪೂತವಾದ ಬಾಗೀರದಿಗೆ ಪೋಗಿ ಮೃತರಿಗೆ ತಿಲೋದಕ ದಾನವಂ ಕೊಟ್ಟು, ಪುನಃ ಶೋಕಬರ ಖಿನ್ನರಾಗಲು ಅವರನ್ನು ಕೃಷ್ಣನು ಸಮಾದಾನಪಡಿಸಿದನು ಪುತ್ರಶೋಕಾರ್ತ್ತರಾದ ಗಾಂದಾರೀ ದೃತರಾಷ್ಟ್ರರನ್ನು, ದ್ರೌಪದಿ ಯನ್ನು, ಕುಂತಿಯನ್ನು ಸಂತೈಸಿದನು ಮುನಿಗಳಾದರೂ "ಬೂತಗಳಿಗೆ ಕಾಲದಿಂದ ಆಗುವ ಮರಣಾದಿಗಳು ಹರೀಚ್ಚೆಯಂತೆ ಆಗುವವು ಅವುಗಳಿಗೆ ಪ್ರತೀಕಾರವಿಲ್ಲ" ಎಂದು ಬೋದಿಸಿದರು

ಈ ರೀತಿಯಾಗಿ ಶ್ರೀಹರಿಯು ಅಜಾತಶತ್ರುವಿಗೆ ರಾಜ್ಯಸಂಪದವನ್ನು ಶತ್ರುಗಳಿಂದ ಕಸಿದುಕೊಟ್ಟು ತ್ರಿಗುಣಪಲಕವಾದ ಐದಶ್ವಮೇದಗಳನ್ನು ಮಾಡಿಸಿ, ಧರ್ಮರಾಜನ ಪಾವನ ಕೀರ್ತಿಯನ್ನು ಇಂದ್ರಯಶೋವಿಭವವನ್ನು ವಾಮನನಾಗಿ ಬೆಳೆಸಿದಂತೆ ಸಕಲದಿಕ್ಕುಗಳಲ್ಲಿ ಬೆಳಗಿದನು ಪಾಂಡವಾದಿಗಳ ಅಪ್ಪಣೆಯ ಪಡೆದು ದ್ವೈಪಾಯನಾದಿಗಳಂ ಪೂಜಿಸಿ ಅವರ ಸತ್ಕಾರವಂ ಪೊಂದಿ ದ್ವಾರಕೆಗೆ ಹೋಗಲು ಉದ್ದವ ಸಾತ್ಯಕಿಗಳೊಡನೆ ರದವನ್ನಾರೋ ಹಿಸಿದನು

ಆ ತರುಣದಲ್ಲಿ ಉತ್ತರಾದೇವಿಯು ಬಯಕಾತುರಳಾಗಿ ಓಡಿಬಂದು ಕೃಷ್ಣನಿಗೆ ವಂದಿಸಿ ಇಂತೆಂದಳು

"ದೇವೇಶ! ಪಾಹಿ ಪಾಹಿ! ಮೃತ್ಯುಗ್ರಸ್ತವಾದೀ ಲೋಕದಿ ನೀನೊಬ್ಬನೇ ಭಯರಹಿತ ನಾಗಿರುವಿ. ನನ್ನ ಭಯವಂ ಪರಿಹರಿಸು! ಹರೇ! ಬಯಂಕರವಾದ ಬಾಣಾಗ್ನಿಯು ದುಸ್ಸಹವಾಗಿದೆ. ಶ್ರೀಶಾ! ನನ್ನ ಚಿಂತೆಯೆನಗಿಲ್ಲ, ಗರ್ಭಗತನಾದೀ ಆರ್ಭಕನನ್ನು ರಕ್ಷಿಸು. ಪಾಂಡವವಂಶಾಂಕುರವನ್ನುಳಿಸು!" ಎಂದು ಶರಣಾಗತಳಾದ ಅವಳ ಮಾತನ್ನಾಲಿಸಿ ಬಕ್ತವತ್ಸಲನು ಸುಬದ್ರೆಯ ಸೊಸೆಯ ಗರ್ಬಗತಾರ್ಬಕನ ಸಂಹರಿಸಿ ಬೂಮಂಡಲವನ್ನು ಅಪಾಂಡವವನ್ನಾಗಿ ಮಾಡಲು ಅಶ್ವತ್ಥಾಮನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿರುವುದನ್ನರಿ ತನು ಅದೇ ಸಮಯದಲ್ಲಿ ದ್ರೋಣನಂದನನಿಂದ ಪ್ರಯುಕ್ತವಾದ ನಿಶಿತ ಮಾರ್ಗಣಂಗಳು ಪಾಂಡವರಿಗಭಿಮುಖವಾಗಿ ಉರಿಯುತ್ತಾ ಬರಲು ಅವರು ಪ್ರತ್ಯಸ್ತ್ರಂಗಳನ್ನು ಕೈಕೊಂಡು ಸೆಣಸಿದರು.

ಅನನ್ಯಭಕ್ತರಾದ ತನ್ನವರಾದ ಪಾಂಡವರ ವ್ಯಸನವಂ ಕಂಡು ಪುಂಡರೀಕಾಕ್ಷನು ಸುದರ್ಶನ ಚಕ್ರದಿಂದ ಅವರನ್ನು ರಕ್ಷಿಸಿದನು. ಸರ್ವಭೂತಾಂತರ್ಯಾಮಿಯು ಅಣಿಮಾದಿ ಯೋಗಾಧಿಪತಿಯು ಭಕ್ತದುಃಖಹರಣಶೀಲನಾದ ಶ್ರೀಕೃಷ್ಣನು ಕುರುಸಂತಾನವು ನಶಿಸದಿರಲು ತಾನೇ ಗರ್ಭವನ್ನು ಪ್ರವೇಶಿಸಿ ಗರ್ಭಸ್ಥ ಶಿಶುವನ್ನು ಯೋಗಸಾಮರ್ಥ್ಯ ದಿಂದಾವರಿಸಿ, ಬ್ರಹ್ಮಾಸ್ತ್ರದಿಂದ ಹಾನಿಯಾಗದಂತೆ ರಕ್ಷಿಸಿದನು. ಶೌನಕಾ! ಬ್ರಹ್ಮಾಸ್ತ್ರ ವೆಂದರೆ ಸಾಮಾನ್ಯವಲ್ಲ. ಅದಕ್ಕೆದುರಿಲ್ಲ, ಆದರೂ ಚಕ್ರತೇಜದಿಂದ ಅದು ಶಾಂತವಾಗಿ ಹೋಯಿತು. ಕೃಷ್ಣನ ಪ್ರಯಾಣವಂ ಕಂಡು ಉದ್ಧತವಾಗುತ್ತಿದ್ದ ಆ ಬ್ರಹ್ಮಾಸ್ತ್ರವನ್ನು ಪುನಃ ಚಕ್ರವು ಅಡಗಿಸಿತು. ಸರ್ವಾಶ್ಚರ್ಯಮಯನಾದ ಅಚ್ಯುತನು ತನ್ನವಳಾದ ರಮಾ ದೇವಿಯಿಂದ ಕೂಡಿ ಈ ಜಗವನ್ನು ನಿರ್ಮಿಪನು ಸಂರಕ್ಷಿಪನು ಸಂಹರಿಸುವನಿಂತಹ ಅಮೋಘವೀರ್ಯನಾದ ಸ್ವಾಮಿಯ ವಿಷಯದಲ್ಲಿದೇನಚ್ಚರಿ! ಹೀಗೆ ದರಣೀಸುರ ಬಾಣನಿವಾರಣವಂ ಮಾಡಿ, ಪ್ರಯಾಣಾಭಿಮುಖನಾದ ಕೃಷ್ಣನಂ ಕಂಡು ಕುಂತಿಯು ಸಂತಸದಿಂದಿಂತು ಸ್ತುತಿಸಿದಳು

"ಕೃಷ್ಣಾ! ಆದಿಪುರುಷನು, ಅವ್ಯಯನು, ಪ್ರಕೃತಿವಿಲಕ್ಷಣನು, ಅಪ್ರಮೇಯ ಮಹಿಮನು, ಸರ್ವಗತನೂ, ನಿತ್ಯನೂ ಆದ ನಿನಗೆ ನಮಸ್ಕಾರವು. ಜವನಿಕಾಚ್ಛನ್ನನಾದ ನಟವರನಂತೆ ಇರುವ ನಿನ್ನನ್ನು ನಿನ್ನ ಬಂದಕಶಕ್ತಿಯಿಂದ ಮೂಢಳಾಗಿ ನಾನು ತಿಳಿಯ ದಿರುವೆ. ನಮ್ಮ ಕೃಷ್ಣನೆಂಬೆನಾಗಲಿ ಸರ್ವಭೂತಾವಾಸನೆಂದು ತಿಳಿಯಲಿಲ್ಲ ಅವಿದ್ಯಾಕಾಮ ಕರ್ಮಾದಿ ಮಲರಹಿತ ಮನಸ್ಕರಾದ ಸನಕಾದಿಯೋಗಿವರರ ಹಾಗೂ ಮುನಿವರರ ಬಕ್ತಿವೃದ್ಧಿಗಾಗಿ ಅವತರಿಸಿದ ನಿನ್ನನ್ನು ನಾವು—ಅದರಲ್ಲಿ ಸ್ತ್ರೀಯರು—ಸುದೃಢಸ್ನೇಹಪೂರ್ವಕ ವಾಗಿ ಅವರಂತೆ ಬಜಿಸುವದೆಂತು? ಶ್ರೀಕೃಷ್ಣ! ಲಕ್ಷ್ಮೀಸುಖವರ್ದನ ನಂದಗೋಪಾನಿಷ್ಟ ಮರ್ದನ! ವೇದವೇದ್ಯಗೋವಿಂದ! ನಿನಗೆ ನಮಸ್ಕಾರ! ದೇವಕೀಕುಮಾರ! ಪಂಕಜನಾಭ! ಪಂಕಜಹಾರ! ಪಂಕಜನೇತ್ರ! ಪರಮಪವಿತ್ರ! ಪಂಕಜಪಾದ! ನಿನಗೆ ವಂದನವು! ಸರ್ವೇಂ ದ್ರಿಯಪ್ರೇರಕ! ಹಿಂಸಾಶೀಲನಾದ ಕಂಸನಿಂದ ಪೀಡಿಸಲ್ಪಟ್ಟ ತಾಯಿಯಾದ ದೇವಕಿಯ ಚಿರಕಾಲೀನತಾಪವನ್ನು ನೀ ನಿವಾರಿಸಿದುದೇನು ಆಶ್ಚರ್ಯವು! ಪುತ್ರರಿಂದ ಕೂಡಿದ ನನ್ನನ್ನು ಪುನಃ ಪುನಃ ಬಂದ ವಿಪದ್ಗಣದಿಂದ ಪಾರು ಮಾಡಿದ ನಿನ್ನ ಉಪಕಾರವನ್ನು ಮರೆಯಲಾರೆ ಹರೀ! ಎಷ್ಟೆಂದು ಪೇಳಲಿ! ಅನ್ನದಲ್ಲಿ ವಿಷವನ್ನಿಟ್ಟರು! ಮನೆಯಲ್ಲಿಟ್ಟು ಸುಟ್ಟರು! ದುಷ್ಟಸಬೆಯಲ್ಲುಟ್ಟ ಸೀರೆಯಂ ಸೆಳೆಯಲು ಮುಟ್ಟಿದರು, ಕಪಟದ್ಯೂತದಲ್ಲಿ ಪಣಕಟ್ಟಿ ದರು, ಬಕಕಿಮ್ಮೀರಾದಿರಾಕ್ಷಸರು ಬಕ್ಷಿಸಲು ಬೆನ್ನಟ್ಟಿದರು. ರಣರಂಗದಲ್ಲಿ ಮಹಾ ರಥರೆಲ್ಲಾ ಕಲೆತು ಅಸ್ತ್ರಗಳಂ ಬಿಟ್ಟರು, ಅಶ್ವತ್ಥಾಮನೋ ಏನ ಪೇಳಲಿ ಗರ್ಭಸ್ಥ ಶಿಶುವಿನ ಅಸುವಿಗೆ ಹಗೆಯಿಟ್ಟ, ಇಷ್ಟು ವಿಪತ್ತಿನಿಂದ ಪಾರಾದುದು ನಿನ್ನ ಅನುಗ್ರಹದಿಂದಲ್ಲವೇ? ಕೃಷ್ಣಾ! ನಾನು, ನನ್ನ ಪುತ್ರರೆನ್ನಸೊಸೆ, ಅವಳ ಸೊಸೆ, ಅವಳ ಮಗನಿಂತು ನಮ್ಮೆಲ್ಲರ ರಕ್ಷಿಸಿ ಸಲಹಿದ ಸ್ವಾಮಿ! ನಿನ್ನನ್ನು ಇದೊಂದೇ ಕೊಡೆಂದು ಬೇಡುವೆನು ಆಗಾಗ ನಮಗೆ ನಿನ್ನ ದಿವ್ಯದರ್ಶನಕಾರಣವಾದ ವಿಪತ್ತುಗಳನ್ನೇ ಕೊಡು ನಿನ್ನ ಮರೆಸುವ ಸಂಪತ್ತು

ಬೇಡ ಕುಲ, ಧನ, ವಿದ್ಯಾ, ರೂಪ ವೈಬವಗಳಿಂದ ಮದಮತ್ತನಾದವನು ನಿನ್ನನ್ನು ಸ್ಮರಿಸಲಾರನು. ಏಕಾಂತಬಕ್ತಚಿಂತಾಮಣೀ! ಜಾಗ್ರದಾದಿ ತ್ರಿಗುಣಕೃತವಿಕಾರರಹಿತನಾದ, ಸ್ವರಮಣನಾದ, ಆನಂದಪೂರ್ಣನಾದ ಅಪ್ರಾಕೃತನಾದ ಮುಕುಂದ! ನಮೋನಮಃ ಬೂತಗಳ ಯೋಗ್ಯತೆಯಂತೆ ಪಲಕೊಡುವ ಸ್ವಾಮೀ! ನೀನೇ ಕಾಲನಾಗಿ ಸುಜನಾಬೀಷ್ಟವಂ ಪೂರೈಸುವಿ. ಈಶಾನಾದಿವಂದ್ಯ! ಮುಖ್ಯಪ್ರಾಣನೂ ನಿನ್ನಿಂದ ಜನನ ಲಯಗಳನ್ನು ಪೊಂದು ವನೆಂದ ಮೇಲೆ ಇತರರ ಪಾಡೇನು? ಕುರುಪಾಂಡವಕಲಹವ್ಯಾಜದಿಂದ ಸಂಹಾರಕಾರಣನು ನೀನೇ! ಯೋಗ್ಯತಾತಿರೇಕದಿ ನಿನಗೆ ಯಾರೂ ಶತ್ರುಗಳಲ್ಲ, ಯಾರೂ ಮಿತ್ರರಲ್ಲ ಆದರೂ ತಾಮಸರು ನೀನು ತಮ್ಮಲ್ಲಿ ದ್ವೇಷ ಮಾಡುವಿ ಎಂದು ತಪ್ಪಾಗಿ ತಿಳಿದು ನಿನ್ನನ್ನು ನಿಂದಿಪರು ಬಗವನ್! ಮನುಜರಲ್ಲಿ ಮನುಜನಂತೆ ಮಾಡುವ ನಿನ್ನ ಈ ವಿಡಂಬನವನ್ನು ಯಾರೂ ತಿಳಿಯಲಾರರು. ಅಜನಾದ ನಿನ್ನ ಜನ್ಮವು ಅಕರ್ತನಾದ ನಿನ್ನ ಕರ್ಮವು ಆಶ್ಚರ್ಯಕರವಲ್ಲವೇ? ತಿರ್ಯಗಾದಿಯಲ್ಲಿ ವರಾಹನಾಗಿ, ನರರಲ್ಲಿ ರಾಮನಾಗಿ, ಋಷಿ ಗಳಲ್ಲಿ ಬಾರ್ಗವನಾಗಿ, ಜಲಚರಗಳಲ್ಲಿ ಮತ್ಸ್ಯನಾಗಿ ನೀ ಮಾಡಿದ ವಿಡಂಬನೆಯಿಂದ ನೀನು ಜನನಾದಿಗಳುಳ್ಳ ಕರ್ಮಪಲಬದ್ದನಾದ ಜೀವನಲ್ಲವೆಂದು ತಿಳಿದುಬರುವದು. ಕೋಪದಿ ಗೋಪಿಕೆಯು ದಧಿಬಾಂಡವನ್ನೊಡೆದ ನಿನ್ನನ್ನು ಕಟ್ಟಲು ಹಗ್ಗವನ್ನು ತಂದಾಗ ಕಾಡಿಗೆ ಕಣ್ಣಿಂದ ಬಾಷ್ಪಗಳನ್ನುದುರಿಸಿ ಮತ್ತಿಷ್ಟು ಕಪ್ಪಾದ ನಿನ್ನ ಮುದ್ದುಮುಖವನ್ನು ಕೈಗಳಿಂದ ತಿಕ್ಕುತ್ತಾ, ನಿಟ್ಟುಸಿರು ಬಿಡುತ್ತಾ ಬಯಪಟ್ಟವನಂತೆ ಕಂಪಿಸುತ್ತಾ ನಿಂತ ನಿನ್ನನ್ನು ನೋಡಿ ಎಂತಹ ಜ್ಞಾನಿಗಳೂ ನೀನು ಮನುಜಬಾಲಕನೇ ಎಂಬ ಅಜ್ಞಾನವನ್ನು ಪೊಂದುವರು. ದುರ್ಗಾರಮಣ! ಕಿಂಕರಶಂಕರ! ನಿನಗೇತರ ಬಯವು?

ಕೃಷ್ಣಾ! ಮಲಯಪರ್ವತದಿ ಚಂದನದಂತೆ ಯದುಕುಲದಿ ಪುಣ್ಯಶ್ಲೋಕನಾದ ಯದುರಾಜನ ಕೀರ್ತಿಯಂ ಬೆಳಗಲು ಜನ್ಮರಹಿತನಾದರೂ ಪುಟ್ಟಿದೆಯೆಂದು ಕೆಲವರೆಂದರೆ ಬೇರೆ ಕೆಲವಿದ್ವಾಂಸರು ದೇವಕೀ ವಸುದೇವರು ಮಾಡಿದ ತಪಃಪಲವಾಗಿ ಸಜ್ಜನ ರಕ್ಷೆಯನ್ನು ದುರ್ಜನ ಶಿಕ್ಷೆಯನ್ನು ಮಾಡಲು ಪುತ್ರನಾಗಿ ಬಂದೆ, ಎಂಬರು. ಕೆಲವರು ಸಮುದ್ರ ಮದ್ಯದಿ ಬಾರದಿಂದ ಮುಣುಗುತ್ತಿರುವ ನೌಕೆಯಂತೆ ಬೂರಿಸುರವೈರಿಬಾರಕರ್ಷಿತಳಾದ ಬೂದೇವಿಯಿಂದ ಪ್ರಾರ್ದಿತನಾಗಿ ಬ್ರಹ್ಮನ ಬಿನ್ನಹವಂ ಲಾಲಿಸಿ ಬೂಬಾರಬೂತ ದುಷ್ಟ ಜನ ಸಂಹಾರವನ್ನು ಮಾಡಲು ಅವತರಿಸಿದೆ, ಎಂಬರು ಸಂಸಾರದಲ್ಲಿ ಅವಿದ್ಯಾಕಾಮ ಕರ್ಮಗಳಲ್ಲಿ ತೊಳಲಿ ಕಷ್ಟಪಡುವ ಸುಜನರ ಕ್ಲೇಶನಾಶಕವಾದ ಲೀಲಾವಿಲಾಸವನ್ನು ತೋರಿಸಲು ಜನಿಸಿದೆ ಎಂದು ಕೆಲವರನ್ನುವರು ನಿನ್ನ ದಿವ್ಯಕದೆಯಂ ಕೇಳುವ, ನಿನ್ನನ್ನೇ ಪಾಡಿ ಪೊಗಳುವ, ನಿನ್ನ ಪುಣ್ಯಸ್ಮರಣೆ ಮಾಡುವವರೇ ಘನದುರ್ಜನ್ಮಪರಂಪರಾಹರಣ ದಕ್ಷವೂ ಮಹಾಮುನಿರಕ್ಷಕವೂ ಆದ ನಿನ್ನ ಪದಾಂಬುಜವನ್ನು ಕಾಣುವರು ಇಂದು ನೀನೆಮ್ಮನ್ನು ಬಿಟ್ಟಗಲುವ ಮನಸ್ಸೇಕೆ ಮಾಡಿದೆ? ಪ್ರಬೋ! ನೀನುಂಡ ಪವಿತ್ರವಾದ ನೈವೇದ್ಯವನ್ನುಂಡು ಬದುಕುವ, ನಿನ್ನ ಪಾದಾಂಬುಜವಂಬಿಟ್ಟನ್ಯಗತಿಯನ್ನು ಕಾಣದಿರುವ ನಮ್ಮನ್ನೇಕೆ ಬಿಡುವೆ? ನೀನಿಲ್ಲದಿರಲು ನಮಗೂ ಯಾದವರಿಗೂ ನಾಮರೂಪಗಳುಂಟೇ?

ನೀ ಕೊಟ್ಟ ಖ್ಯಾತಿ ನಿನ್ನದು ಸಮೃದ್ಧಿ! ನಿನ್ನ ದರ್ಶನವೆಮಗೆ ಇಂದ್ರಿಯಗಳಿಗೆ ಮುಖ್ಯಪ್ರಾಣ ದರ್ಶನದಂತೆ ಜೀವನವೆನಿಸಿದೆ. ನಿನ್ನ ವಿರಹವೆಮಗೆ ಮರಣವೇ ಸರಿ! ಹಸ್ತಿನಾವತಿಯು ನಿನ್ನ ಪದಶುಬ ಲಕ್ಷಣಾಂಕಿತವಾಗಿ ಶೋಭಿಸುತ್ತಿರುವಂತೆ ನೀನು ದ್ವಾರಕೆಗೆ ಪೋಗಲು ಶೋಭಿಸಲಾರದು. ನಿನ್ನ ಕಾರುಣ್ಯಾಮೃತದೃಷ್ಟಿ ವೀಕ್ಷಿತವಾಗಿ ಈ ಜನಪದಗಳೀಮರಬಳ್ಳಿ ಗಳು ಈ ವನಾದ್ರಿ ನದೀ ಸಮುದ್ರಗಳು ಸಮೃದ್ಧವಾಗಿ ಶೋಭಿಸುತ್ತಿವೆ ಪೋಗು ಎನ್ನಲಾ ನಮಗೆ ಅನಿಷ್ಟ, ಇರು ಎನ್ನಲಾ ಯಾದವರಿಗನಿಷ್ಟ! ಉಬಯವ್ಯಾಕುಲಳಾದ ನನ್ನ ಈ ಪಾಂಡವ ಯಾದವರಲ್ಲಿರುವ ಬಂಧು ಸ್ನೇಹಪಾಶವನ್ನು ಕಡಿದು ನಿನ್ನ ಬಕ್ತರೆಂಬುವ ಸ್ನೇಹಮಾತ್ರವನ್ನು ಉಳಿಸು ಗಂಗೆ ಸಮುದ್ರರತಳಾದಂತೆ ನನ್ನ ಮನಸ್ಸು ನಿನ್ನಲ್ಲಿ ಅನನ್ಯ ವಿಷಯವಾಗಿ ರಮಿಸಲಿ! ಶ್ರೀಕೃಷ್ಣ! ಪಾರ್ಥಸಖ! ಯಾದವ ಪಾಂಡವರ ದ್ರೋಹಿಗಳ ನಾಶಮಾಡಿದ ಅಮರ ವಂದ್ಯ! ಗೋವಿಂದ! ಗೋಬ್ರಾಹ್ಮಣ ದೇವಸುಜನಾರ್ತಿಹರಣ! ನಾರಾಯಣ! ಸರ್ವಸಮರ್ಥ! ಬಗವನ್! ಕೃಷ್ಣ! ನಿನಗಿದೋ ನಮಸ್ಕಾರವು."

ಎಂದು ನುತಿಸಿದ ಕುಂತಿಯ ಮದುರಾಲಾಪವನ್ನು ಕೇಳಿ ನಸುನಕ್ಕು ಅವಳನ್ನು ಮೋಹಪಡಿಸುತ್ತಾ ಶ್ರೀಕೃಷ್ಣನು ಆಕೆಯನ್ನು ಇತರರನ್ನು ಬೀಳ್ಕೊಟ್ಟು ಹಸ್ತಿನಾವತಿಯಂ ಬಿಟ್ಟು ಪೊರಡುವನಾಗಿಯೂ ಧರ್ಮಜಾದಿಪ್ರಾರ್ಥಿತನಾಗಿ ಕೆಲಕಾಲವಲ್ಲೆ ನೆಲಸಿದನು.

## ೯. ಭೀಷ್ಮ ನಿರ್ಯಾಣ

ಬಂದುವಧಜನಿತಶೋಕಾತುರನಾದ ಯುಧಿಷ್ಠಿರನು ಆಶ್ಚರ್ಯಚಕಿತನಾದ ಹರಿಯಿಂದಲು, ಬೂಬಾರಹರಣಾದಿಕಾರ್ಯಗತನಾಗಿ ಅವತರಿಸಿದ ಸತ್ಯಸಂಕಲ್ಪನಾದ ಕೃಷ್ಣನ ಮರ್ಮವನ್ನರಿತ ವೇದವ್ಯಾಸಾದಿ ಮುನಿಗಳಿಂದಲೂ 'ವಿಷ್ಣುದ್ವಿಟ್ ತದನುಬಂದಿ ನಿಗ್ರಹವು ಕ್ಷತ್ರಿಯರಿಗೆ ಪರಮದರ್ಮವೆಂದು' ಬೋಧಿತನಾದರೂ ದುಃಖಾಕ್ರಾಂತನಾಗಿ ಇಂತು ಚಿಂತಿಸಿದನು

ಆಹಾ! ಏನು ನನ್ನ ಅಜ್ಞಾನವು! ಪರಕೀಯವೇ ಆದ ಈ ದೇಹದ ಸುಖಕ್ಕೆಂದು ಎಷ್ಟು ಅಕ್ಷೌಹಿಣೀ ಜನರ ಪ್ರಾಣಗಳನ್ನು ತೆಗೆದುಕೊಂಡೆ! ಛೇ! ನನ್ನಷ್ಟು ದುರಾತ್ಮರಿನ್ನಾರು? ಅಬಿಮನ್ಯು ಮೊದಲಾದ ಬಾಲಕರು, ದ್ರೋಣಾದಿ ವಿಪ್ರರು, ದ್ರುಪದಾದಿ ಬಂದುಜನರು, ಅಶ್ವತ್ಥಾಮಾದಿ ಮಿತ್ರರು, ಭೂರಿಶ್ರವ ಬಾಹ್ಲಿಕಾದಿ ಹಿರಿಯರು ದುರ್ಯೋದನಾದಿ ಸೋದರರು, ಕೃಪಬೀಷ್ಮಾದಿ ಗುರುಜನರು—ಇವರಿಗೆಲ್ಲಾ ದ್ರೋಹವನ್ನೆಸಗಿದ ನನಗೆ ಸಾವಿರಾರು ವರ್ಷಗಳವರೆಗೂ ನರಕವಾಗುವದು! ವೇದಗಳಲ್ಲಿ ರಾಜನಿಗೆ ದರ್ಮಯುದ್ಧದಲ್ಲಿ ಶತ್ರುವದೆಯು ಪಾಪವಲ್ಲವೆಂದು ಇದೆ! ಆದರೂ ನನಗೇಕೋ ಪಾಪಭಯವು ಕಾಡುತ್ತಿದೆ! ನನ್ನ ಬಂದುಗಳ ತರುಣಿಯರು ವೈದವ್ಯವಂ ಪೊಂದಿದರು, ಅವರ ಮಕ್ಕಳು ಪರದೇಶಿ ಗಳಾದರು! ನಾನೆಷ್ಟು ಅಶ್ವಮೇದಾದಿ ಪುಣ್ಯಕರ್ಮಗಳ ಮಾಡಿದೊಡೇನು? ಕೆಸರು ಮೆತ್ತಿದ ದ್ರವ್ಯವನ್ನು ಕೆಸರು ನೀರಿನಿಂದ ತೊಳೆದರೆ ನಿರ್ಮಲವಾಗುವದೇ? ಹೆಂಡದ ಪಾತ್ರೆಯನ್ನು

ಹೆಂಡದಿಂದ ತೊಳೆದರೆ ಸುಗಂದಿತವಾಗುವದೇ? ಅಂತೆಯೇ ನಾನು ಮಾಡಿದ ಬೂತಹತ್ಯಾ ಪಾಪರಾಶಿಯನ್ನು ಪಶುಹಿಂಸಾಯುತವಾದೀ ಯಾಗಗಳು ಹೇಗೆ ಕಳೆಯುವವು?"

ಹೀಗೆ ಪ್ರಜಾದ್ರೋಹ ಬೀತನಾಗಿ ಸರ್ವದರ್ಮರಹಸ್ಯವನ್ನು ತಿಳಿಯಲು ಕಾತರನಾದ ದರ್ಮರಾಜನು ಬೀಷ್ಮನು ಶರಪಂಜರದಲ್ಲಿ ಮಲಗಿರುವ ರಣಬೂಮಿಗೆ ತೆರಳಿದನು. ಆಗ ಭೀಮಾದಿ ಸೋದರರೂ ಸ್ವರ್ಣಬೂಷಿತವಾದ ಕುದುರೆಗಳಂ ಕಟ್ಟಿದ ದಿವ್ಯರಧಗಳಲ್ಲಿ ಧರ್ಮರಾಜನನ್ನು ಹಿಂಬಾಲಿಸಿದರು ವ್ಯಾಸದೌಮ್ಯಾದಿ ವಿಪ್ರರು ಐತಂದರು ದನಂಜಯನ ರಧದಲ್ಲಿ ಪಾರ್ದಸಾರಧಿಯೂ ದಯಮಾಡಿದನು ಗುಹ್ಯಕರಿಂದ ಕೂಡಿದ ಕುಬೇರನಂತೆ ಶೋಬಿಸುವ ದರ್ಮರಾಜನು ಸ್ವರ್ಗದಿಂದಿಳಿದುಬಂದ ದೇವತೆಯಂತೆ ಕಂಗೊಳಿಸುವ ಬೀಷ್ಮನನ್ನು ನೋಡಿ ನಮಸ್ಕಾರ ಮಾಡಿದನು ಅಂತೆಯೇ ಭೀಮಾದಿಗಳು ಪರಿವಾರದವರು ಕೃಷ್ಣನೂ ಕೂಡ ನಮಿಸಿದರು ಯೋಗಸಾಮರ್ದ್ಯದಿಂದ ಇದನ್ನರಿತ ದೇವರ್ಷಿ ಬ್ರಹ್ಮರ್ಷಿ ರಾಜರ್ಷಿಗಳಲ್ಲಿಗೆ ತಂಡೋಪತಂಡವಾಗಿ ಶಿಷ್ಯಜನರನ್ನು ಕರೆದುಕೊಂಡು ಬಂದರು. ಪರ್ವತ, ನಾರದ, ಧೌಮ್ಯ, ಬಗವಾನ್ ವೇದವ್ಯಾಸ, ಬೃಹದಶ್ವ, ಬರದ್ವಾಜ, ಶ್ರೀಪರಶು ರಾಮ, ವಸಿಷ್ಠ, ಇಂದ್ರಪ್ರಮದ, ಗೃತ್ಸಮದ, ತ್ರಿತ, ಅಸಿತ, ಕಕ್ಷೀವಾನ್, ಗೌತಮ, ಚಿತ್ರಕೌಶಿಕ, ಸುದರ್ಶನ, ಶುಕಾಚಾರ್ಯ, ಕಶ್ಯಪ, ಅಂಗಿರಸ, ಮುಂತಾದ ಮಹನೀಯರನ್ನು ಕಂಡು, ಬೀಷ್ಮನು ದೇಶಕಾಲಾನುಸಾರವಾಗಿ ಅವರನ್ನು ಮನಸಾ ಪೂಜಿಸಿದನು. ತನ್ನ ಮುಂದೆ ಆಸೀನನಾದ ಸ್ವೇಚ್ಚಾಕೃತಾವತಾರನಾದ ವಾಸುದೇವನನ್ನು ನೋಡಿ ಸ್ವಾಂತ ರ್ಯಾಮಿಯೇ ಇವನೆಂದಾ ಜಗದೀಶನನ್ನು ನಮಿಸಿ ವಿನಯಾಬಿಮಾನಸಮನ್ವಿತರಾದ ಪಾಂಡುಸುತರನ್ನು ನೋಡಿ ಬಾಷ್ಪಾಕುಲಿತನೇತ್ರನಾಗಿಂತೆಂದನು.

"ಆಹಾ! ಎಷ್ಟು ಕಷ್ಟ! ಏನನ್ಯಾಯ? ದರ್ಮರಾಜ! ವಿಪ್ರರನ್ನು ದರ್ಮವನ್ನು ಕೃಷ್ಣನನ್ನು ಬಿಡದೆ ಆಶ್ರಯಿಸಿದ ನಿಮಗೂ ಇಷ್ಟು ವ್ಯಸನಗಳು ಬರಬೇಕೆ? ಪಾಂಡುರಾಜನು ಮೃತನಾಗಲು ಚಿಕ್ಕಮಕ್ಕಳಾದ ನಿಮ್ಮನ್ನು ಕಟ್ಟಿಕೊಂಡು ಕುಂತಿಯು ನಿಮಗಾಗಿ ಪಟ್ಟ ಕ್ಲೇಶಗಳೆಷ್ಟು! ನಿಮ್ಮ ಕಷ್ಟಗಳನ್ನು ನೋಡಿ ಎಲ್ಲವೂ ನಮ್ಮ ಪ್ರಾರಬ್ಧಪ್ರೇರಕ ಹರೀಚ್ಛೆ ಯಂತೆ ನಡೆಯುವದೆಂದು ತಿಳಿದಿರುವೆನು ಕಾಲರೂಪಿಯ ವಶದಲ್ಲಿ ಲೋಕವು, ಮೇಘ ವೃಂದವು ವಾಯುವಶನಾಗಿರುವಂತೆ ನಡೆಯುತ್ತಿದೆ, ನೋಡು! ಪ್ರಜಾರಂಜಕನಾದ ಧರ್ಮ ರಾಜನೇ ರಾಜನು, ಕ್ಷಿತಿಬಾರಭೂತ ದಿತಿಸುತ ಶೋಣಿತ ದಿಗ್ಧಗದಾಪಾಣಿಯು ಹೃದಯ ಪೀರ ಸಮರ್ಚಿತ ಚಕ್ರಪಾಣಿಯು ಆದ ಭೀಮಸೇನನೇ ನಾಯಕನು, ದ್ರೋಣಾನುಗ್ರಹ ಸಂಪಾದಿತಾಸ್ತ್ರಗ್ರಾಮನು, ಸಂತೋಷಿತ ಶಿವಸಂಗ್ರಾಮನು ಚಂಡಗಾಂಡೀವ ದನುರ್ದಾರಿ ಯಾದ ಅರ್ಜುನನೇ ಯುದ್ಧಚಾಲಕನು, ಸರ್ವಸುಪರ್ವಾಧಿರಾಜನು, ಬಲವೀರ್ಯಾದ್ಯ ನಂತ ಗುಣಸಿಂಧುರಾಜನು ಸಾಕ್ಷಾದ್ಭಗವಂತನಾದ ಕೃಷ್ಣನೇ ಅನಿಮಿತ್ತ ಬಂದುವಾಗಿರು ವಲ್ಲಿಯೂ ಇಷ್ಟು ವಿಪತ್ತುಗಳು ಬರಬೇಕೇ? ರಾಜನ್! ಇವನ ವಿಚಾರವನ್ನು ಮಾಡ ತೊಡಗಿ ಬ್ರಹ್ಮರುದ್ರಾದಿಗಳೂ ಮೋಹಿತರಾಗಿರುವರು! ಇವನ ಲೀಲೆಯನ್ನು ಯಾರಿಗೂ ತಿಳಿಯಲಾಗದು! ಹರಿಯೇ ಸ್ವತಂತ್ರನು! ಅವನ ವಶದಲ್ಲಿರುವ ಅವನ ಆಟದ ಗೊಂಬೆ

ಗಳು ನಾವು ಅವನ ಇಚ್ಛೆಯಂತೆ ನಡೆ! ಅನಾದರಾಗಿ, ದುರ್ಯೋಧನ-ದುಶ್ಶಾಸನಪೀಡಿತ ರಾದ ಪ್ರಜರನ್ನು ಚೆನ್ನಾಗಿ ರಕ್ಷಿಸು ಈ ಕೃಷ್ಣನಾರೆಂದು ತಿಳಿದಿರುವೆ? ಪೂರ್ಣನಾದ ಸಾಕ್ಷಾನ್ನಾರಾಯಣನೇ ಧರ್ಮರಾಜಾ! ತನ್ನ ಇಚ್ಛೆಯಿಂದ ಬಂದಕ ಶಕ್ತಿಯಂ ಬೀರಿ ಲೋಕದ ಜನರಿಗೆ ತಿಳಿಯದಂತೆ ಗೂಡನಾಗಿ ಯಾದವರಲ್ಲಿ ಚರಿಸುವ ಹರಿಯೇ ಕಾಲರೂಪಿಯಾಗಿ ತತ್ತದ್ಯೋಗ್ಯಫಲ ಪ್ರದಾನವನ್ನು ಮಾಡುತ್ತಲಿರುವನು ಸರ್ವವೇದ ಪ್ರತಿಪಾದ್ಯನಾದ ಇವನ ಅಗಾದ ಮಹಿಮೆಯನ್ನು ಶಿವನೊಬ್ಬ ಬಲ್ಲ, ಬ್ರಹ್ಮ ಬಲ್ಲ. ತನ್ನ ಮಹಿಮೆಯನ್ನು ತಾನೆ ಕಪಿಲನಾಗಿ ಬಲ್ಲ ನಾರದನೂ ಬಲ್ಲ ವತ್ಸಾ! ಏನೆಂದು ವೇಳಲಿ? ಈ ಗೋವಿಂದ ನನ್ನು ಮಿತ್ರನೆಂದೆ ಮಾತುಲಪುತ್ರನೆಂದೆ ಬಂಧುವೆಂದೆ ಸಾರದಿಯಂ ಮಾಡಿದೆ. ದೂತ ನಾಗಿಸಿದೆ ಮಂತ್ರಿಯಂತೆ ಬಳಸಿದೆ ನೀ ಮಾಡಿದ ಈ ಕರ್ಮಗಳಿಂದ ಸರ್ವಸ್ವಾಮಿಯು ಸರ್ವಾಂತರ್ಯಾಮಿಯು, ಸಮಾದಿಕರಹಿತನು, ಪಕ್ಷಪಾತದುರಬಿಮಾನಾದಿ ಸರ್ವದೋಷ ವರ್ಜಿತನೂ ಆದ ಕೃಷ್ಣನಿಗೇನು ಕುಂದು? ಹಿಗ್ಗು ಕುಗ್ಗುಗಳಿಲ್ಲದ ನಮ್ಮಯ ಪ್ರಬುವು ನನ್ನಲ್ಲಿ ಮಾಡಿದ ವಾತ್ಸಲ್ಯವನ್ನು ನೋಡು! ನಾನು ಪ್ರಾಣಗಳನ್ನು ಬಿಡುವ ಸುಸಮಯದಿ ತನ್ನ ದರ್ಶನವನ್ನು ಸಾಕ್ಷಾತ್ತಾಗಿ ಕೊಡುತ್ತಿಪ್ಪ ನಮ್ಮಪ್ಪನ ಕರುಣೆಗೇನೆಂಬೆ! ಬಕ್ತಿಯಿಂದ ಅವನಲ್ಲಿ ಮನವನ್ನಿಟ್ಟು ವಚಸಾ ಅವನನ್ನು ಪಾಡಿ ಪೊಗಳುತ್ತಾ ಕಳೇವರವನ್ನು ಬಿಡುವ ಯೋಗಿಜನರು ಕಾಮಕರ್ಮರೂಪ ಸಂಸಾರದಿಂದ ಮೋಕ್ಷವನ್ನೈದುವರಂತೆ! ಇನ್ನು ಸಾಕ್ಷಾತ್ ಆ ಬಗವಂತನನ್ನು ನೋಡುತ್ತಾ ಶರೀರವನ್ನು ಬಿಡುವ ಭಾಗ್ಯವೆನಗೆ ಕೊಟ್ಟು ಮುಂದೆ ನಿಂತ ಗೋವಿಂದನು ನನ್ನ ಕೈಬಿಡುವನೇ? ಇಲ್ಲ. ದೇವದೇವಾ! ಕೃಷ್ಣಾ! ಸ್ವಚ್ಛಂದ ಮರಣವನ್ನೆನಗೆ ನಮ್ಮ ತಂದೆಯು ಕೊಟ್ಟದ್ದೆಂತಹ ಚಂದವಾಯಿತು! ಪ್ರಸನ್ನ ಮಂದಹಾಸ ವದನಾರವಿಂದಸುಂದರನಾಗಿ ಕಮಲಾರುಣಲೋಚನನಿರ್ಮುಕ್ತ ಕರುಣಾಕಟಾಕ್ಷಬಂದುರ ನಾಗಿ, ಓ ಚತುರ್ಬುಜನೇ ನನ್ನ ದ್ಯಾನವಿಷಯನಾಗು!

ಎಂದು ಶರಪಂಜರಶಯಿತನಾದ ಕುರ ಕುಂಜರನ ವಚನವನ್ನಾಲಿಸಿ ದರ್ಮರಾಜನು ಮುನಿ ಸುಜನಸಬಾಮದ್ಯದಲ್ಲಿ ಮಂದಾಕಿ ಿನಂದನನಿಂದ ವಿವಿದ ವಿಷಯಗಳನ್ನು ಕೇಳಿ ತಿಳಿದನು. ತ್ರಿವಿದ ಪುರುಷಸ್ವಬಾವ, ನರಜಾತಿ ಸಾದಾರಣದರ್ಮ ವರ್ಣಾಶ್ರಮದರ್ಮ, ರಾಗವಿರಾಗ ಸಹಕೃತವಾದ ಪ್ರವೃತ್ತಿ ನಿವೃತ್ತಿದರ್ಮಗಳು, ದಾನಧರ್ಮ, ರಾಜದರ್ಮ, ಸ್ತ್ರೀದರ್ಮ, ಶಮದಮಾದಿ ಮೋಕ್ಷಸಾದಸ, ಸ್ರಷ್ಟೃತ್ವಾದಿ ಹರಿಲಕ್ಷಣಗಳು, ಹರಿತೋಷ ಕರವಾದ ಏಕಾದಶ್ಯಾದಿ ಶುಬವ್ರತಗಳು, ಸಾದನ ಸಹಿತವಾದ ದರ್ಮಾರ್ದಕಾಮ ಮೋಕ್ಷ ಗಳು ಮೊದಲಾದುವನ್ನು ನಾನಾಖ್ಯಾನೇತಿಹಾಸಗಳಿಂದ ವರ್ಣಿಸಿ ತತ್ವವಿದಗ್ರಣಿಯಾದ ಬೀಷ್ಮನು ವಿಶೇಷಪುಣ್ಯಕಾಲವಾದ ಉತ್ತರಾಯಣವು ಬಂದಿರುವುದನ್ನರಿತು ತನ್ನ ಶರೀರ ತ್ಯಾಗ ಸಮಯವಿದೇ ಎಂದು ನಿಶ್ಚಯಿಸಿದನು

ತತ್‌ಕ್ಷಣವೇ ವಿಷಯಪರವಾಗಿಂದ್ರಿಯವನ್ನುಪಸಂಹರಿಸಿದನು. ಸಕಲೇತರಸಂಗ ರಹಿತವಾದ ಮನವ ್ನು ಪೀತಾಂಬರದಾರಿಯು, ಬಕ್ತಮನೋಹಾರಿಯು ಚತುರ್ಬುಜಾ ಕಲಿತನು ಜನ್ಮಾದಿಷ ೋಷರಹಿತನು ಆದ ಕೃಷ್ಣನಲ್ಲಿಟ್ಟು ಸರ್ವೇಂದ್ರಿಯ ವ್ಯಾಪಾರವನ್ನು

ಬಿಟ್ಟು, ಸ್ತುತಿಸಲುಪಕ್ರಮಿಸಿದನು ಪಲರಾಗಮುಖದೋಷರಹಿತವಾದ ನಿರಂತರ ಮನೋದಾರಣಾ ಬಲದಿಂದ ನಿರಸ್ತಪಾಪನಾಗಿ ಶ್ರೀಕೃಷ್ಣನ ಕಟಾಕ್ಷಪಾತದಿಂದ ಆಯುದ ವ್ಯದೆಯನ್ನೂ ಅಂತೆಯೇ ಮಮಕಾರಾದಿ ಬ್ರಮೆಯನ್ನೂ ಕಾಣದೆ ಶುದ್ಧನಾಗಿ ಜನನ ಮರಣ ಪರಂಪರಾನಾಶಕನಾದ ವಾಸುದೇವನನ್ನಿಂತು ಪೊಗಳಿದನು ಬಾಲ್ಯದಿಂದ ತೃಷ್ಣಾದೂರವಾಗಿಸಿ ಕೃಷ್ಣನಲ್ಲಿಟ್ಟಿದ್ದ ಮನಸ್ಸನ್ನು ಸಮುಖಿಸುಮುಖನಾದ ಪಾರ್ದಸಖನಲ್ಲಿಟ್ಟನು ಸಂಸಾರ ಪ್ರವಾಹಕಾರಣನಾದ ನಾರಾಯಣನು ರಮಾದೇವಿಯಿಂದ ಕ್ರೀಡಿಸಿ ಪ್ರಕೃತಿಯಿಂದ ಜಗವ ನಿರ್ಮಿಸಿರುವನು ಸ್ವಮಹಿಮಾಮಹಿತನು. ಅವ್ಯಾಹತ ಷಡ್ಗುಣೈಶ್ವರ್ಯಸಹಿತನು ಅವನೇ ಇಂದು ಯಾದವ ಕುಲದಿ ಜನಿಸಿರುವನವನೇ ಎನಗೆ ಗತಿ" ಎಂದನು

"ತ್ರಿಜಗನ್ಮೋಹನ ನೀಲಮೇಪಸುಂದರ ಶರೀರಿಯೂ ಪ್ರಾಬಾತ ನೀರಜ ಬಂದು ಕಿರಣಾಬಪೀತಾಂಬರಧಾರಿಯೂ ನೀಲಾಲಕಕುಲಕಲಿತಕಮನೀಯಮುಖಾರವಿಂದನೂ ಆದ ಗೋವಿಂದನಲ್ಲಿ ಎನಗೆ ನಿಷ್ಕಲ್ಮಷಬಕ್ತಿಯು ಇರಲಿ! ನಮ್ಮ ವಿಜಯ ಸಖನ ಅಪರಾದ ಸಹಿಷ್ಣುತೆಯನ್ನೆಷ್ಟು ಬಣ್ಣಿಸಲಿ! ಹಯರಿಂಖಾಮುಖದೂಳಿದೂಸರ ಕುಂತಲವೃಂದದಿಂದಲೂ, ರಯಜಾತಶ್ರಮವಾರಿ ಬಿಂದುಗಳಿಂದಲೂ ಅಲಂಕೃತಮಾದ ಆನನದಿಂದ ಸುಂದರನಾಗಿ ನನ್ನ ನಿಶಿತಶರಗಳಿಂದಲೂ ಬಿದ್ಯಮಾನವಾಗದೆ ಶೋಬಿಸುವ ಕೃಷ್ಣನನ್ನ ಶ್ರಾಂತವೂ ಚಿಂತಿಸುವೆ ನರನ ನುಡಿಯನ್ನು ಕೇಳಿ ಸೇನಾದ್ವಯ ಮದ್ಯದಲ್ಲಿ ರದವನ್ನು ನಿಲ್ಲಿಸಿ ನಿಂತು ನೋಟದಿಂದಲೇ ಪರಸೈನಿಕಾಯುಶ್ಯೇಷವನ್ನು ನಿಶ್ಯೇಷವಾಗಿ ಹರಿಸಿ ಅನಾಯಾಸದಿಂದ ಬೂಬಾರಹರಣವನ್ನಾಚರಿಸಿದ ಕೃಷ್ಣನಲ್ಲೆನ್ನ ಮತಿಯು ನಿಲ್ಲಲಿ! ಸ್ವಜನ ವಧೆಯು ದೋಷಮೆಂದು ರಣದಿಂದ ವಿಮುಖನಾದ ಸಖನ ಕುಮತಿಯನ್ನು ನಾಶಗೊಳಿಸಲು ಗೀತೆ ಎಂಬ ಬ್ರಹ್ಮವಿದ್ಯೆಯನ್ನುಪದೇಶಿಸಿದ ಸರ್ವೋತ್ತಮನ ಚರಣದಲ್ಲೆನ್ನ ಮನವು ನಿರಂತರವಾಗಿ ರಮಿಸಲಿ! ತಾನು ಆಯುದವನ್ನು ಪಿಡಿಯುವುದಿಲ್ಲವೆಂದನು. ನಾನವನಿಂದ ಆಯುದವನ್ನು ಪಿಡಿಸುವೆನೆಂದನು. ಬಕ್ತವತ್ಸಲನಾದ ಶ್ರೀಹರಿಯು ತನ್ನ ಮಾತನ್ನು ಪಾಲಿಸುವುದಂ ಬಿಟ್ಟು ಈ ದಾಸನ ನುಡಿಯ ಸತ್ಯವಾಗಿಸಲು ನಿಶ್ಚಯಿಸಿದುದೆಷ್ಟು ಮನೋಹರವು! ಯುದ್ಧಬೂಮಿಯಲ್ಲಿ ರದದಿಂದ ಕೆಳಗಿಳಿದು ರದಾಂಗವಂ ಕೈಲಿ ಪಿಡಿದು ಭರದಿಂ ಬರುವಾಗ ಜಾರಿದ ಉತ್ತರೀಯದಿಂದಲೂ ಬಾಣಕ್ಷತರಕ್ತಪರಿಪ್ಲುತಗಾತ್ರದಿಂದಲೂ ಅಪರಾಧಿಯಾದೆನ್ನನ್ನು ಕೊಲ್ಲುವೆನೆಂದು ಅರ್ಜುನನಿಗೆ ಪೇಳುತ್ತಾ, ಅವನಿಂದ ವಾರಿತನಾದರೂ ಬಿಡದೆ ಆನೆಯ ಮೇಲೇರಿ ಬರುವ ಸಿಂಹದಂತೆ ಬಂದ ಗೋವಿಂದನೇ ನನಗೆ ದಿಕ್ಕಾಗಲಿ! 'ವಿಜಯರದವೆನ್ನ ಕುಟುಂಬವದನ್ನು ರಕ್ಷಿಪುದೆನ್ನ ಕರ್ತವ್ಯ'ವೆಂಬುವಂತೆ, ತೋತ್ರವನ್ನು ಹಯರಶ್ಮಿಗಳನ್ನು ಕೈಗಳಲ್ಲಿ ದರಿಸಿ, ಅನಾಯಾಸವಾಗಿ ರಕ್ಷಣೆಯಂ ಗೈದ ಬಗವಂತನಲ್ಲಿ ನನ್ನ ಚಿತ್ತವು ಹತ್ತಲಿ! ಮುಮೂರ್ಷನಾದ ಎನಗಿನ್ನಾರು ದಿಕ್ಕು? ಪ್ರಯಾಣ ಕಾಲದಲ್ಲಿವನಂ ನೋಡಿದವರಿಗೆ ವೈಕುಂಠಾದಿ ಲೋಕಗಳಲ್ಲಿ ಸ್ವಯೋಗ್ಯ ಸುಖವು ಪ್ರಾಪ್ತವಾಗುವುದಲ್ಲವೇ? ಇವನ ಲಲಿತಗತಿವಿಲಾಸ, ಮಂದಹಾಸ, ಪ್ರೇಮವೀಕ್ಷಣ ದುಷ್ಟಶಿಕ್ಷಣಾದಿ ಲೀಲೆಯನ್ನು ಕಂಡು ಕೊಂಡಾಡಿ, ಇವನಲ್ಲೇ ಮನಸ್ಸನ್ನು ಮಾಡಿ ಗೋಪ

ಕಾಂತೆಯರು ಕೂಡ ಜಡಶರೀರಾದಿಗಳನ್ನು ತ್ಯಜಿಸಿ ಸ್ವಬಾವಾವಿರ್ಬಾವಲಕ್ಷಣ ಮೋಕ್ಷ ವನ್ನು ಪಡೆಯಲಿಲ್ಲವೇ? ಅಂತಹ ಈ ಸರ್ವಾಂತರ್ಯಾಮಿಯಾದ ಸ್ವಾಮಿಯು ಶರೀರದಾರಿಗಳಾದ ಜೀವರ ಹೃದಯಕುಹರದಲ್ಲಿ ಪ್ರತ್ಯೇಕನಾಗಿದ್ದೂ ಸೂರ್ಯನೊಬ್ಬನೇ ಉಪಾದಿಬೂತನೇತ್ರೇಂದ್ರಿಯಬೇದದಿಂದ ಅನೇಕನಾಗಿ ತೋರುವಂತೆ ಅನೇಕ ಬಿಂಬ ರೂಪನಾಗಿದ್ದೂ ಸ್ವಗತಬೇದವಿವರ್ಜಿತನಾಗಿರುವನು ಈ ಸರ್ವೇಶನ ಗುಣರೂಪಗಳಲ್ಲಿ ಬೇದಬ್ರಮವೆನಗೆ ದೂರವಾಯಿತು. ಯಥಾಸ್ಥಿತಿವಸ್ತುವಿಜ್ಞಾನವೆನಗೆ ಹರಿಕರುಣೆಯಿಂದಾ ಯಿತು. ದ್ಯೂತದ ನೆಪದಿಂದ ಕುರುವಂಶವನ್ನಳಿಸಿ ಬೂಬಾರವನ್ನಿಳಿಸಿದ ಶ್ರೀಕೃಷ್ಣನ ಬಕ್ತಜನ ಶೋಕನಾಶಕವಾದ ಪಾದಾರವಿಂದವನ್ನು ಹೃದಯದಿ ದರಿಸಿ ಈ ಶರೀರವನ್ನು, ಗೂಡನ್ನು ಬಿಡುವ ಹಕ್ಕಿಯಂತೆ ಬಿಡುವೆ"ನೆಂದು ಮನೋವಾಙ್ನೇತ್ರಗಳಿಂದ ಕೃಷ್ಣನಿಗೆ ಶುದ್ದನಾದ ತನ್ನನ್ನೇ ತಾನು ಸಮರ್ಪಿಸಿ ಅಸಂಪ್ರಜ್ಞಾತ ಸಮಾದಿಯನ್ನು ಪಹಿಸಿ ತನ್ನ ಮೂಲರೂಪವನ್ನೈದಿದನು

ಇಂತು ಗುಣಪೂರ್ಣನಾದ ಅಪ್ರಾಕೃತನಾದ ಹರಿಯಲ್ಲಿ ಮನಸ್ಸನ್ನಿಟ್ಟು ಉಪರತ ನಾದ ಬೀಷ್ಮನನ್ನು ಕಂಡು ಪಾಂಡವಾದಿ ಸರ್ವರೂ ಸಾಯಂಕಾಲದಿ ಪಕ್ಷಿಗಳಂತೆ ಸುಮ್ಮನೆ ನಿಂತು, ಚಿಂತಿಸಿದರು

ಆಗ ದೇವದುಂದುಭಿಗಳು ಮೊಳಗಿದವು. ಗಂದರ್ವರು ಪಾಡಿದರು. ಅಪ್ಸರೆಯರಾಡಿ ದರು. ಸಾದುಗಳು ಪ್ರಶಂಸಿಸಿದರು. ಪೂಮಳೆಗರೆಯಿತು ತಾತನನ್ನು ನೆನೆದು ದುಃಖಿಸಿ ಸಾಧುದರ್ಮಜನು ಬೀಷ್ಮನಿಗೆ ಮಾಡುವ ಉತ್ತರಕ್ರಿಯೆಗಳನ್ನು ತಾನೂ ಮಾಡಿ ಬೀಮಾದಿ ಗಳಿಂದಲೂ ಮಾಡಿಸಿದನು. ಮುನಿಗಳು ಶ್ರೀಕೃಷ್ಣಮಹಿಮೆಯನ್ನು ನೋಡಿ ಪುಲಕಾಂಕುರಿತ ಗಾತ್ರರಾಗಿ ಕೃಷ್ಣನ ಪವಿತ್ರನಾಮ ಕೀರ್ತನೆಯನ್ನು ಮಾಡುತ್ತಾ ತಮ್ಮ ಆಶ್ರಮಗಳಿಗೆ ತೆರಳಿದರು.

ಶ್ರೀಕೃಷ್ಣನಿಂದ ಕೂಡಿ ಧರ್ಮರಾಜನು ಹಸ್ತಿನಾವತಿಯನ್ನು ಸೇರಿದನು ಗಾಂದಾರೀ ದೃತರಾಷ್ಟ್ರರನ್ನು ಕುಂತಿಯನ್ನು ಸಂತೈಸಿದನು ದೃತರಾಷ್ಟ್ರನ ಅನುಮತಿಯನ್ನು ಪಡೆದು ಶ್ರೀಕೃಷ್ಣರಕ್ಷಿತನಾಗಿ ದರ್ಮರಾಜನು ಪಿತೃಪೈತಾಮಹವಾದ ರಾಜ್ಯವನ್ನು ಪ್ರಜಾರಂಜಕನಾಗಿ ಆಳಿದನು ಎಂದು ಸೂತನು ಪೇಳಿದನು.

## ೧೦. ಶ್ರೀಕೃಷ್ಣದ್ವಾರಕಾಗಮನವು

ಆಗ ಶೌನಕನು ಇಂತೆಂದನು

ತನ್ನ ಸಂಪತ್ತನ್ನಪಹರಿಸಿ ಕಲಹಪ್ರಿಯರಾದ ದುಷ್ಟಬಂಧುಗಳನ್ನು ವಧಿಸಿ ಧರ್ಮ ರಾಜನು ವ್ಯಾಸಾದಿ ದರ್ಮಜ್ಞವಚನವಿಧೇಯನಾಗಿ ರಾಜ್ಯವನ್ನೆಂತು ಪಾಲಿಸಿದನು? ಅನುಜ ರಿಂದ ಕೂಡಿ ಬೋಗಾಸಕ್ತನಾಗದೆ ಜೀವನವಂ ಕಳೆದನಂತೆ! ಅದು ಹೇಗೆ?" ಎಂದು ಕೇಳಲು ಸೂತನು ಹೇಳಿದನು

"ಕುರುಸಂತತಿವೃದ್ದಿಗಾಗಿ ಪರೀಕ್ಷಿತನನ್ನು ವಂಶಾಂಕುರವಂ ಮಾಡಿ ರಕ್ಷಿಸಿ

ಜಗಜ್ಜನ್ಮಾದಿ ಕಾರಣನಾದ ನಾರಾಯಣನು ದರ್ಮರಾಜನನ್ನವನ ರಾಜ್ಯದಲ್ಲಿ ಸ್ಥಾಪಿಸಿ ನಿತ್ಯಪ್ರಮುದಿತನಾದ ಶ್ರೀಕೃಷ್ಣನು ಸಂತೋಷಪಟ್ಟನು ಉತ್ತಮಕಲ್ಪದಿಂದಾಚರಿಸಲ್ಪಟ್ಟ ಅಶ್ವಮೇದ ಯಾಗಗಳನ್ನು ಧರ್ಮರಾಜನಿಂದ ಮಾಡಿಸಿ ಇಂದ್ರನ ಕೀರ್ತಿಯಂತೆ ಅವನ ಕೀರ್ತಿಚಂದ್ರಿಕೆಯನ್ನು ದಿಗಂತಗಳಲ್ಲಿ ಬೆಳಗಿಸಿದನು ದರ್ಮಜನಾದರೂ ಬೀಷ್ಮನ ನುಡಿಗಳನ್ನು ಅಚ್ಯುತನ ಉಪದೇಶವನ್ನು ಕೇಳಿ ಸರ್ವಸ್ವತಂತ್ರನಾದ ಹರಿಯ ಅದೀನವೀ ಜಗವೆಂದರಿತನು. ದುರ್ಯೋದನಾದಿ ದುಷ್ಟವದೆಯು ಪಾಪವಲ್ಲವೆಂದೂ ತಿಳಿದನು ಅಜಿತನಾದ ಕೃಷ್ಣನಾಶ್ರಯದಿ ಇಂದ್ರನಂತೆ ಬೂಮಿಯನ್ನು ಪಾಲಿಸುತ್ತಾ ಸಪ್ತಪ್ರಣಿದಿ ಸಂಪಾದಿತ ಸಕಲೈಶ್ವರ್ಯನಾಗಿ ಅನುಜಸೇವಿತನಾಗಿದ್ದನು. ಬೇಕಾದಾಗ ಮಳೆ, ಬೇಕಾದಷ್ಟು ಬೆಳೆ, ಹಾಲುಹೈನ ಅನೂನ, ವಿವಿದ ಋತುಸಮಯ ಸಮೃದ್ದ ದಾನ್ಯರಾಶಿಗಳು, ನದೀ ಸಮುದ್ರ ಪರ್ವತ ವನಸ್ಪತಿಗಳು ನೀಡುವ ಐಶ್ವರ್ಯಪಪಾರವಾಗಿದ್ದವು ಅನಾವೃಷ್ಟಿ ಮುಂತಾದ ಅದಿದೈವಿಕ ಕ್ಲೇಶ, ಉನ್ಮಾದಪ್ರಮುಖಾದಿಬೌತಿಕ ದುಃಖ, ಕುಷ್ಠಾದಿ ಅದ್ಯಾತ್ಮಿಕ ರೋಗ ಇವುಗಳಿಲ್ಲದೇ ಜನರು ಸುಖಿಗಳಾಗಿದ್ದರು

ಶ್ರೀಕೃಷ್ಣನು ಹಸ್ತಿನಾಪತಿಯಲ್ಲಿ ಕೆಲಕಾಲವಿದ್ದು ಸುಬದ್ರೆಗೂ ಬಂದುಗಳಿಗೂ ಪ್ರಿಯಪಂ ಮಾಡಿ, ಅವರೆಲ್ಲರನ್ನು ಬೀಳ್ಕೊಟ್ಟು ದರ್ಮರಾಜನಿಗೆ ಲೋಕಾಚಾರದಂತೆ ವಂದಿಸಿ, ಬೀಮಾದಿಗಳನ್ನಾಲಿಂಗಿಸಿ, ಅರ್ಜುನಾದಿಗಳನ್ನಾಶೀರ್ವದಿಸಿದನು ಶ್ರೀಕೃಷ್ಣನು ರದಾರೋಹಣವನ್ನು ಮಾಡುತ್ತಿರಲು ಸುಬದ್ರಾ-ದ್ರೌಪದಿಯರು, ಉತ್ತರಾ-ಕುಂತಿಯರು, ಗಾಂದಾರೀ-ದೃತರಾಷ್ಟ್ರರು, ವಿದುರ-ದರ್ಮಜರು, ಯುಯುತ್ಸು-ಕೃಪಾಚಾರ್ಯರು, ನಕುಲ-ಸಹದೇವರು, ವೃಕೋದರನು, ಧೌಮ್ಯನು, ಶಾರ್ಙ್ಗಪಾಣಿಯ ವಿರಹವನ್ನು ಸಹಿಸಲಾರದೆ ಸಂಭ್ರಮಕಾತರರಾದರು ಇದೇನಾಶ್ಚರ್ಯವು! ಶೌನಕಾ! ಯಾವ ಪ್ರಬುವಿನ ಸಂಗದಿಂದ ಮನುಜನು ದುಸ್ಸಂಗದೂರನಾಗಿ, ಒಂದು ಸಲ ಕೇಳುತ್ತಲೇ ರುಚಿಯಂ ಪುಟ್ಟಿಸುವ ಅವನ ಯಶೋಗಾನವನ್ನಾಕರ್ಣಿಸಿ ಬಿಡಲಾರನೋ ಅಂತಹ ಹರಿಯ ವಿರಹವನ್ನೆಂತು ಸಹಿಸಲು ಶಕ್ತರಾಗುವರು? ದರ್ಶನಸ್ಪರ್ಶನಾಲಾಪಶಯನಾಸನ ಬೋಜನಾದಿ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಇಂದಿರಾರಮಣನಲ್ಲಿ ಅಬ್ಯಸ್ತವಾಗಿ ಪ್ರಶಸ್ತವಾದ ಬುದ್ಧಿಯುಳ್ಳ ಪಾಂಡವಾದಿಗಳವನಂ ಬಿಡಲಾಗದೆ, ಎವೆ ಇಕ್ಕದ ಕಣ್ಣುಗಳಿಂದ ನೋಡುತ್ತಾ ಮನಸ್ಸೆಲ್ಲವೂ ಅವನ ಹಿಂಬಾಲಿಸಿಪೋದಿತೆಂಬಂತೆ ಕರ್ತವ್ಯಮೂಡರಾಗಿ ಸಂಚರಿಸುತ್ತಿದ್ದರು. ಮಂದಿರವನ್ನು ಬಿಟ್ಟು ಗೋವಿಂದನು ಪೊರಡುವಾಗ ಬಂದುಜನರು ಕಣ್ಣಲ್ಲಿ ಕವಿದ ಬಾಷ್ಪಗಳನ್ನು ಶುಬವಲ್ಲವೆಂದು ತಡೆದರು.

ಆಗ ಶಂಖಗಳನೂದಿದರು ಬೇರಿಮೃದಂಗವೀಣಾಪಣವಗೋಮುಖಾದಿವಾದ್ಯಗಳು ಬೋರ್ಗರೆದವು! ಕುರುನಾರಿಯರು ಸುರವೈರಿಯನ್ನು ನೋಡಲುತ್ಸುಕರಾಗಿ, ಪ್ರಾಸಾದ ಶಿಖರಗಳನ್ನೇರಿ ಹರಿಶಿರದಿ ಕುಸುಮವೃಷ್ಟಿಯಂಗರೆದರು, ಪ್ರೇಮದಿಂದ ಪಾಡಿದರು, ಲಜ್ಜೆಯಿಂದ ಕೂಡಿದರು ಕಮಲನೇತ್ರೆಯರು ಕಮಲೇಶನ ಕಂಡಾನಂದ ಪೊಂದಿದರಾಗ ಮುಕ್ತಾದಾಮಚಿತ್ರಿತದವಳಚ್ಛತ್ರವನ್ನು ದನಂಜಯನು ಪ್ರಿಯತಮನ ಮೇಲೆ ಪಿಡಿದು

ನಡೆದನು. ಉದ್ಧವ-ಸಾತ್ಯಕಿಯರು ವ್ಯಜನಗಳ ಬೀಸುತ್ತಿದ್ದರು ಮುಕ್ತಾಮುಕ್ತ ನಿಯಾಮಕನಾದ ರಮೇಶನ ಗುಣವರ್ಣನರೂಪವಾದ ಆಶೀರ್ವಾದಗಳ ಮಾಡಿ, ಬ್ರಾಹ್ಮಣರು ಸತ್ವರಜಸ್ತಮೋಗುಣ ರಹಿತನಾದರೂ ಆನಂದಾದಿ ಸಕಲ ಕಲ್ಯಾಣಗುಣಾಕರನಾಗಿರುವ ಅಪ್ರಮೇಯನೆಂದು ಸ್ತುತಿಸಿದರು

ಉತ್ತಮಶ್ಲೋಕನಾದ ಕೃಷ್ಣನಲ್ಲಿ ಭಕ್ತಿಭರಿತರಾದ ಹಸ್ತಿನಾವತಿಯ ಉತ್ತಮ ಸತಿಯರು ವೇದಸಾರ ಮನೋಹರವಾದ ವಚನತತಿಯಿಂದ ಅವನನ್ನು ಕೊಂಡಾಡಿದರು

"ತರುಣೀ! ಯಾದವಪತಿಯೇ ಈ ಕೃಷ್ಣ? ಪುರಾತನಪುರುಷನು ಆದ್ಯನು ಮಹಾಪ್ರಳಯಕಾಲದಲ್ಲಿ ಜೀವಜಡಾತ್ಮಕ ಜಗವನ್ನು ಪೊಟ್ಟೆಯಲ್ಲಿಟ್ಟು, ತಮೋರೂಪ ದುರ್ಗಾಸತಿಯಿಂದ ಗೂಹಿತನಾಗಿ, ಅವಳ ಸ್ತೋತ್ರವನ್ನು ಕೇಳುತ್ತಾ, ರಮೆಯಿಂದ ರಮಿಸುತ್ತಾ ಜಗದ್ವ್ಯಾಪಾರವನ್ನುಪರಮಿಸಿ, ಯೋಗನಿದ್ರಾಮುದ್ರಿತನೇತ್ರನಾದ ಪರಮ ಪವಿತ್ರನು ಸರ್ವತಂತ್ರಸ್ವತಂತ್ರನು ಇವನೇ ತನ್ನವಳಾದ ರಮೆಯನ್ನು ಶ್ರೀಭೂದುರ್ಗಾ ರೂಪತ್ರಯದಿಂದ ತನ್ನಲ್ಲಿ ಕ್ರೀಡಿಸುವಂತೆ ಪ್ರೇರೇಪಿಸಿ ಪ್ರಾಕೃತನಾಮರೂಪರಹಿತನಾದ ತಾನೇ ಆದಾರನಾಗಿ ಪ್ರಾಕೃತನಾಮರೂಪಸಹಿತ ಜೀವಸೃಷ್ಟಿಯನ್ನು ಮಾಡಲು ಅವಳಿಂದ ಕ್ರೀಡಿಸಿ, ಬ್ರಹ್ಮಾಂಡಾದಿಸೃಷ್ಟಿಯನ್ನು ಮಾಡಿದನು. ಜಿತೇಂದ್ರಿಯರಾಗಿ ವಾಯುಜಯವನ್ನು ಪಡೆದ ಭಕ್ತಸತ್ತಮರು ಇವನ ಪಾದಾರವಿಂದ ದರ್ಶನವನ್ನು ಪೊಂದುವರು ಅಂತಹ ಈ ಶ್ರೀಶನೆಮ್ಮ ಚಿತ್ತಗಳನ್ನು ಶುದ್ಧವನ್ನಾಗಿಸಲಿ! ಈ ಸೃಷ್ಟಿಸ್ಥಿತಿಲಯಕಾರಣನಾದ ಕೃಷ್ಣನನ್ನು ವೇದಗಳಿಂದ ಉಪನಿಷದಾದಿ ರಹಸ್ಯಮಂತ್ರಗಳಿಂದ ವೇದವಾದಿಗಳು ಪೊಗಳುವರು ಆಪ್ತಕಾಮನಾದ ಸ್ವಾಮಿಗೆ ಸ್ಪೃಹಾದಿಗಳುಂಟೇ? ಅದರ್ಮದಿಂದ ರಾಜರಾಳುವಾಗ ದರ್ಮ, ಸತ್ಯ, ಋತ, ದಯ, ಯಶ, ಶರಣಜನಕ್ಷೇಮ, ಇವುಗಳಿಗೆ ಬಂಗವು ಬರಲು, ಆಯಾ ಕಾಲದಲ್ಲವತರಿಸಿ ಸಜ್ಜನರನ್ನು ಸಲಹುವನು ಇವನು ಪುಟ್ಟಿದ ಯದುಕುಲವೇ ಪಾವನ ಪಾಯಿತು ಈ ಪುರುಷೋತ್ತಮನ ಪಾದಪಂಕಜಪರಾಗಪವಿತ್ರವಾಯಿತಾ ಮದುರಾಪುರಿ ಅಹೋ! ಕುಶಸ್ಥಲಿಯು ಇವನ ಸಾನ್ನಿದ್ಯದಿಂದ ಸ್ವರ್ಗವನ್ನೇ ದಿಕ್ಕರಿಸಿತು ಇವನ ಪ್ರಜರೀ ಗೋವಿಂದನ ಕರುಣಾಪೂರ್ಣಕಟಾಕ್ಷಪಾತಸುಖವನ್ನನುಬವಿಸಿ ಸ್ವರ್ಗವನ್ನೂ ಕಡೆ ಮಾಡಿರುವರು. ಇವನಲ್ಲಿ ಸರ್ವಾಶೆಗಳಂ ಸಮರ್ಪಿಸಿ, ಇವನಿಗಾಗಿ ಜೀವಿಸಿ, ಇವನ ಅದರಾಮೃತಪಾನ ಮಾಡಲು ಆ ಕೃಷ್ಣಕಾಂತೆಯರು ನಿಯತಿಯಿಂದ ನಿರ್ಮಲಮನದಿಂದ ನೊಂತ ವ್ರತಗಳೆಷ್ಟೋ? ಮಿಂದತೀರ್ದಗಳಾವುವೋ? ಗೈದಪೂಜೆಗಳಿನ್ನೆಷ್ಟೋ? ಚೈದ್ಯಾದಿಗಳನ್ನು ಗೆದ್ದು ಸ್ವಯಂವರಾಂಗಣದಿಂದ ತಂದ ಸುಂದರಿಯರು, ನರಕನನ್ನು ಸಂಹರಿಸಿ ಕಾರಾಗಾರದಿಂದ ತಂದ ರಾಜಕುಮಾರಿಯರು ಕೃಷ್ಣನ ಕೈಪಿಡಿಯಲು ಮಾಡಿದ ತಪಸ್ಸಿನ್ನೆಂತಹುದೋ? ಅಹಾ! ಅಗ್ನಿಪುತ್ರರಾದ ಮಹಾತ್ಮರಿವನ ಅಂಗಸಂಗಕ್ಕಾಗಿ ಅಂಗನೆಯರಾಗಲು ತಪಸ್ಸನ್ನು ಮಾಡಿದರಂತೆ! ಇದೇನಾಶ್ಚರ್ಯವು! ಆ ತಪಃಫಲವೆಂದೇ ನಂದನಂದನನು ಅವರ ಮಂದಿರ ಪನ್ನರಗಳಿಗೆಯೂ ಬಿಡದೆ ತನ್ನ ಲೀಲಾವಿಲಾಸಗಳಿಂದ ಅವರ ಮನಮೋಹಕನಾಗಿರುವನು"—ಎಂದೀರೀತಿಯಿಂದಾ ಪುಣ್ಯಸತಿಯರಾಡುವ ಮಾತನ್ನು ಕೇಳಿ ಕಟಾಕ್ಷದಿಂದಲೇ

ಅವರನ್ನೆಲ್ಲ ಬಹುಮಾನಿಸಿ ಕೃಷ್ಣನು ಪ್ರಯಾಣವನ್ನು ಬೆಳೆಸಿದನು. ಶತ್ರುಗಳಿಂದ ಶಂಕಿತನಾಗಿ ದರ್ಮಜನು, ಹರಿಗೆ ರಕ್ಷೆಯೆಂದು ಚತುರಂಗಬಲಂಗಳನ್ನು ಕಳುಹಿಸಿದನು. ಶೌರಿಯು ಬಹುದೂರ ತನ್ನ ಹಿಂದೆ ಬಂದ ಬಂದುಜನರನ್ನು ಹಿಂದಕ್ಕೆ ಕಳುಹಿ ಉದ್ಧವಾದಿಗಳನ್ನು ಕರೆದುಕೊಂಡು ದ್ವಾರಕಾಮಾರ್ಗವನ್ನು ಪಿಡಿದು ನಡೆದನು. ಕುರುಜಾಂಗಲದಿಂದ ಪಾಂಚಾಲ, ಅನಂತರ ಶೂರಸೇನ ಯಾಮುನದೇಶಗಳನ್ನು ದಾಟಿ ಬ್ರಹ್ಮಾವರ್ತ ಕುರುಕ್ಷೇತ್ರಗಳನ್ನತಿಕ್ರಮಿಸಿ, ಮರುದನ್ವಸೌವೀರ ಆಬೀರಸಿಂದುವಿಷಯಗಳಿಂದ ಸರಿದು ತನ್ನದಾದ ಆನರ್ತವನ್ನು ಸಮೀಪಿಸಿದನು ಹಾದಿಯಲ್ಲಿ ಆಯಾದೇಶದ ಜನರು ತನಗೆ ಸಮರ್ಪಿಸಿದ ಕಾಣಿಕೆಯನ್ನು ಸ್ವೀಕರಿಸಿ ಅವರನ್ನು ಅನುಗ್ರಹಿಸಿದನು ಸಾಯಂಕಾಲವಾಗುತ್ತಿರಲು ಕೃಷ್ಣನು ದ್ವಾರಕೆಯನ್ನು, ಸೂರ್ಯನು ಪಶ್ಚಿಮಾಂಬುದಿಯನ್ನು ಸೇರಿದರು. ಆಗ ಶ್ರೀಕೃಷ್ಣನು ತನ್ನವರ ವಿರಹವಿಷಾದ ಶಮನವನ್ನು ಮಾಡಲು ಪಾಂಚಜನ್ಯವನ್ನೆತ್ತಿ ಊದಿದನು ದವಲವಾದಾ ಶಂಖವು ಕೃಷ್ಣನ ಕರಕಮಲದ ಅರುಣಕಾಂತಿಯಿಂದ ರಂಜಿತಮಾಗಿ ದ್ವನಿಸುತ್ತಿರಲು ಅರವಿಂದದಲ್ಲಿರುವ ಕಲಹಂಸಪಕ್ಷಿಯಂತೆ ರಾರಾಜಿಸಿತು ನಿಜಧ್ಯಾನಧ್ವಸ್ತಪಾತಕಸಂಚಯವಾದಾ ಪಾಂಚಜನ್ಯರವವನ್ನು ಕೇಳಿ ಪ್ರಜೆಗಳೆಲ್ಲರು ಬಗವದ್ದರ್ಶನಲಾಲಸರಾಗಿ ಬಂದರು ನಿರಪೇಕ್ಷನು ಪೂರ್ಣಕಾಮನು ಸ್ವಲಾಬ ಪರಿತುಷ್ಟನಾದ ಕೃಷ್ಣನಿಗೆ ರವಿಗೆ ದೀಪವನ್ನು ಪಿಡಿದಂತೆ ಕಾಣಿಕೆಗಳನ್ನರ್ಪಿಸಿ ನಮಿಸಿದರು ತಂದೆಯನ್ನು ಕಂಡ ಕಂದರಂತೆ ಅಮಂದಾನಂದಕಂದಳಿತ ಮುಖಾರವಿಂದರಾಗಿ ಗದ್ಗದಿತಕಂಠದಿಂದ ಅನಿಮಿತ್ತಬಂದುವೂ ರಕ್ಷಕನೂ ಆದ ಅದೋಕ್ಷಜನನ್ನಿಂತು ನುತಿಸಿದರು

ನಾದ! ರಮಾನಾದ! ವಿರಿಂಚಶಂಕರಪುರಂದರಾದಿ ವೃಂದಾರಕ ವಂದ್ಯವಾದ ನಿಮ್ಮ ಪಾದಾರವಿಂದಕ್ಕೆ ಸದಾ ವಂದಿಸುವೆವು. ಕ್ಷೇಮವನ್ನು ಬಯಸುವ ಬಕ್ತರಿಗೆ ನಿನ್ನ ಪಾದಾರವಿಂದವೇ ಗತಿಯು ಜರಾಜನ್ಮರೋಗರಾಗಾದಿಗಳ ಉಪಟಳವನ್ನು ದೂರೀಕರಿಸುವದು. ಪ್ರಬೂ! ನಮಗೆ ಜ್ಞಾನ, ವೈರಾಗ್ಯ, ಬಕ್ತಿಗಳನ್ನು ಕೊಡು! ನೀನೆಮ್ಮ ತಾಯಿ ತಂದೆ ನೀನೇ ಗುರು. ಪ್ರಬು ಮಿತ್ರಾದಿಸರ್ವವೂ ನೀನೇ! ಇಷ್ಟದೈವವಾದ ನಿನ್ನ ಸೇವೆಯಿಂದ ನಾವು ಕೃತಾರ್ದರಾಗುವೆವು ಏನು ನಮ್ಮ ಬಾಗ್ಯವು! ಸ್ವರ್ಗವಾಸಿಗಳಿಗೂ ದೂರದರ್ಶನವು ಸಕಲ ಕ್ಲೇಶಕರ್ಶನವಾದೀ ನಿನ್ನ ಕಲ್ಯಾಣತಮರೂಪ ಸೌಬಾಗ್ಯವೆಮ್ಮದಾಗಿಹುದು. ಮಾದವ! ನೀನು ಹಸ್ತಿನಾಪುರಕ್ಕೋ ಮದುರೆಗೋ ಪೋದಾಗ ಒಂದು ಕ್ಷಣವೂ ಕೋಟಿವರ್ಷಗಳಂತೆ ದುಃಸಹವಾಗುವದು ಸೂರ್ಯನಿಲ್ಲದಾಗ ಕಣ್ಣಿಗೆ ಕತ್ತಲು ಕವಿದಂತೆ ಚಿಂತಿಸುವ ನಿನ್ನವರಾದ ನಮ್ಮನ್ನು ಬಿಟ್ಟು ಪೋಗುವದಾದರೂ ಏತಕ್ಕೆ?" ಎಂದಾಡಿದ ಪ್ರಚುರಮದುರಾಲಾಪಗಳನ್ನು ಕೇಳಿ ಹರಿಯು ನಸುನಗುತ್ತಾ ಪುರವನ್ನು ಪೊಕ್ಕನು ಬಲಶಾಲಿಗಳಾದ ಮಧುಬೋಜದಶಾರ್ಹಕುಕುರಾಂದಕವೃಷ್ಣಿಗಳಿಂದ ಕೂಡಿ ನಾಗರಾಜರಿಂದೊಪ್ಪುವ ಬೋಗವತಿಯಂತೆ ದ್ವಾರಾವತಿಯು ಶೋಬಿಸುತ್ತಿತ್ತು. ಸರ್ವಕಾಲಗಳಲ್ಲಿಯು ಪುಷ್ಪಫಲಬರಿತಮಾದ ವೃಕ್ಷಲತಾಗುಲ್ಮಗಳಿಂದ ಕಂಗೊಳಿಪ ಉದ್ಯಾನೋಪವನಗಳಿಂದಲೂ ವಿಕಸಿತ ಪದ್ಮಾದಿಗಂದಗಂಧಿತ ಸ್ವಚ್ಛ ಜಲಗಳಾದ ಸರಸಿಗಳಿಂದಲೂ ಗೋಪುರ

ಅವರನ್ನೆಲ್ಲ ಬಹುಮಾನಿಸಿ ಕೃಷ್ಣನು ಪ್ರಯಾಣವನ್ನು ಬೆಳೆಸಿದನು. ಶತ್ರುಗಳಿಂದ ಶಂಕಿತನಾಗಿ ದರ್ಮಜನು, ಹರಿಗೆ ರಕ್ಷೆಯೆಂದು ಚತುರಂಗಬಲಂಗಳನ್ನು ಕಳುಹಿಸಿದನು. ಶೌರಿಯು ಬಹುದೂರ ತನ್ನ ಹಿಂದೆ ಬಂದ ಬಂದುಜನರನ್ನು ಹಿಂದಕ್ಕೆ ಕಳುಹಿ ಉದ್ದವಾದಿಗಳನ್ನು ಕರೆದುಕೊಂಡು ದ್ವಾರಕಾಮಾರ್ಗವನ್ನು ಪಿಡಿದು ನಡೆದನು ಕುರುಜಾಂಗಲದಿಂದ ಪಾಂಜಾಲ, ಅನಂತರ ಶೂರಸೇನ ಯಾಮುನದೇಶಗಳನ್ನು ದಾಟಿ ಬ್ರಹ್ಮಾವರ್ತ ಕುರುಕ್ಷೇತ್ರಗಳನ್ನತಿಕ್ರಮಿಸಿ, ಮರುದನ್ವಸೌವೀರ ಆಬೀರಸಿಂದುವಿಷಯಗಳಿಂದ ಸರಿದು ತನ್ನದಾದ ಆನರ್ತವನ್ನು ಸಮೀಪಿಸಿದನು. ಹಾದಿಯಲ್ಲಿ ಆಯಾದೇಶದ ಜನರು ತನಗೆ ಸಮರ್ಪಿಸಿದ ಕಾಣಿಕೆಯನ್ನು ಸ್ವೀಕರಿಸಿ ಅವರನ್ನು ಅನುಗ್ರಹಿಸಿದನು ಸಾಯಂಕಾಲವಾಗುತ್ತಿರಲು ಕೃಷ್ಣನು ದ್ವಾರಕೆಯನ್ನು, ಸೂರ್ಯನು ಪಶ್ಚಿಮಾಂಬುದಿಯನ್ನು ಸೇರಿದರು ಆಗ ಶ್ರೀಕೃಷ್ಣನು ತನ್ನವರ ವಿರಹವಿಷಾದ ಶಮನವನ್ನು ಮಾಡಲು ಪಾಂಚಜನ್ಯವನ್ನೆತ್ತಿ ಊದಿದನು ದವಲವಾದಾ ಶಂಖವು ಕೃಷ್ಣನ ಕರಕಮಲದ ಅರುಣಕಾಂತಿಯಿಂದ ರಂಜಿತಮಾಗಿ ದ್ವನಿಸುತ್ತಿರಲು ಅರವಿಂದದಲ್ಲಿರುವ ಕಲಹಂಸಪಕ್ಷಿಯಂತೆ ರಾರಾಜಿಸಿತು. ನಿಜಧ್ಯಾನದ್ವಸ್ತಪಾತಕಸಂಚಯವಾದಾ ಪಾಂಚಜನ್ಯರವವನ್ನು ಕೇಳಿ ಪ್ರಜೆಗಳೆಲ್ಲರು ಬಗವದ್ದರ್ಶನಲಾಲಸರಾಗಿ ಬಂದರು ನಿರಪೇಕ್ಷನು ಪೂರ್ಣಕಾಮನು ಸ್ವಲಾಬ ಪರಿತುಷ್ಟನಾದ ಕೃಷ್ಣನಿಗೆ ರವಿಗೆ ದೀಪವನ್ನು ಪಿಡಿದಂತೆ ಕಾಣಿಕೆಗಳನ್ನರ್ಪಿಸಿ ನಮಿಸಿದರು ತಂದೆಯನ್ನು ಕಂಡ ಕಂದರಂತೆ ಅಮಂದಾನಂದಕಂದಳಿತ ಮುಖಾರವಿಂದರಾಗಿ ಗದ್ಗದಿತಕಂಠದಿಂದ ಅನಿಮಿತ್ತಬಂದುವೂ ರಕ್ಷಕನೂ ಆದ ಅದೋಕ್ಷಜನನ್ನಿಂತು ನುತಿಸಿದರು.

ನಾಥ! ರಮಾನಾದ! ವಿರಿಂಚಶಂಕರಪುರಂದರಾದಿ ವೃಂದಾರಕ ವಂದ್ಯವಾದ ನಿಮ್ಮ ಪಾದಾರವಿಂದಕ್ಕೆ ಸದಾ ವಂದಿಸುವೆವು ಕ್ಷೇಮವನ್ನು ಬಯಸುವ ಬಕ್ತರಿಗೆ ನಿನ್ನ ಪಾದಾರವಿಂದವೇ ಗತಿಯು ಜರಾಜನ್ಮರೋಗರಾಗಾದಿಗಳ ಉಪಟಳವನ್ನು ದೂರೀಕರಿಸುವದು ಪ್ರಬೂ! ನಮಗೆ ಜ್ಞಾನ, ವೈರಾಗ್ಯ, ಬಕ್ತಿಗಳನ್ನು ಕೊಡು! ನೀನೆಮ್ಮ ತಾಯಿ ತಂದೆ ನೀನೇ ಗುರು. ಪ್ರಬು ಮಿತ್ರಾದಿಸರ್ವವೂ ನೀನೇ! ಇಷ್ಟದೈವವಾದ ನಿನ್ನ ಸೇವೆಯಿಂದ ನಾವು ಕೃತಾರ್ದರಾಗುವೆವು ಏನು ನಮ್ಮ ಬಾಗ್ಯವು! ಸ್ವರ್ಗವಾಸಿಗಳಿಗೂ ದೂರದರ್ಶನವು ಸಕಲ ಕ್ಲೇಶಕರ್ಶನವಾದೀ ನಿನ್ನ ಕಲ್ಯಾಣತಮರೂಪ ಸೌಭಾಗ್ಯವೆಮ್ಮದಾಗಿಹುದು ಮಾದವ! ನೀನು ಹಸ್ತಿನಾಪುರಕ್ಕೋ ಮದುರೆಗೋ ಪೋದಾಗ ಒಂದು ಕ್ಷಣವೂ ಕೋಟಿವರ್ಷಗಳಂತೆ ದುಃಸಹವಾಗುವದು ಸೂರ್ಯನಿಲ್ಲದಾಗ ಕಣ್ಣಿಗೆ ಕತ್ತಲು ಕವಿದಂತೆ ಚಿಂತಿಸುವ ನಿನ್ನವರಾದ ನಮ್ಮನ್ನು ಬಿಟ್ಟು ಪೋಗುವದಾದರೂ ಏತಕ್ಕೆ?" ಎಂದಾಡಿದ ಪ್ರಚುರಮದುರಾಲಾಪಗಳನ್ನು ಕೇಳಿ ಹರಿಯು ನಸುನಗುತ್ತಾ ಪುರವನ್ನು ಪೊಕ್ಕನು ಬಲಶಾಲಿಗಳಾದ ಮಧುಬೋಜದಶಾರ್ಹಕುಕುರಾಂದಕವೃಷ್ಣಿಗಳಿಂದ ಕೂಡಿ ನಾಗರಾಜರಿಂದೊಪ್ಪುವ ಬೋಗವತಿಯಂತೆ ದ್ವಾರಾವತಿಯು ಶೋಭಿಸುತ್ತಿತ್ತು ಸರ್ವಕಾಲಗಳಲ್ಲಿಯು ಪುಷ್ಪಫಲಬರಿತಮಾದ ವೃಕ್ಷಲತಾಗುಲ್ಮಗಳಿಂದ ಕಂಗೊಳಿಪ ಉದ್ಯಾನೋಪವನಗಳಿಂದಲೂ ವಿಕಸಿತ ಪದ್ಮಾದಿಗಂದಗಂದಿತ ಸ್ವಚ್ಛ ಜಲಗಳಾದ ಸರಸಿಗಳಿಂದಲೂ ಗೋಪುರ

ದ್ವಾರಮಾರ್ಗಗಳಲ್ಲಿ ಕಟ್ಟಿದ ಕೌತುಕ ತೋರಣಗಳಿಂದಲೂ, ಬಿಸಿಲನ್ನಿವಾರಿಸುವಂತೆ ಎತ್ತಿ ಕಟ್ಟಿದ ಚಿತ್ರಧ್ವಜ ಪತಾಕೆಗಳಿಂದಲೂ, ತಳಿಲ ಪನ್ನೀರು ಚೆಲ್ಲಿದ ರಾಜಮಾರ್ಗ ಚತ್ವರ ಶೃಂಗಾಟಕಗಳಿಂದಲೂ, ಅಲಂಕಾರ ಮಾಡಿಟ್ಟ ಫಲಪುಷ್ಪಾಕ್ಷತಾಂಕುರಗಳಿಂದಲೂ, ಪೂರ್ಣ ಕುಂಬ ದೀಪಾದಿ ಪೂಜಾಸಾದನಗಳಿಂದ ಇಂಪಾದ ದ್ವಾರದೇಶಗಳಿಂದಲೂ ಶೋಬಿಸುವ ದ್ವಾರಕೆಯನ್ನು ಪ್ರವೇಶಿಸಿ ದಾರುಕ ಸಾರಥಿಯು ಪ್ರಯಾಣಿಸುತ್ತಿರಲು ವಸುದೇವೋಗ್ರಸೇನ ರಾಮಾಕ್ರೂರಪ್ರಮುಖ ಹಿರಿಯರು ಪ್ರದ್ಯುಮ್ನಸಾಂಬಚಾರುದೇಷ್ಣಾದಿ ಕಿರಿಯರು ಪ್ರಹರ್ಷ ವೇಗದಿಂದ ತಾವು ಮಾಡುತ್ತಿದ್ದ ಶಯನಾಸನ ಬೋಜನಾದಿ ಕಾರ್ಯಗಳನ್ನು ಪರಿತ್ಯಜಿಸಿ ಎದುರುಗೊಳ್ಳಲು ಬಂದರು ಆನೆಯನ್ನು ಅಂಬಾರಿಯಿಂದ ಅಲಂಕರಿಸಿ ತಂದರು ದ್ವಿಜರು ಸುಮಂಗಳ ವೇದಘೋಷವನ್ನು ಮಾಡುತ್ತಲೈತಂದರು ಶಂಖ ತೂರ್ಯಾದಿ ಮಂಗಳ ವಾದ್ಯಗಳು ಬೋರ್ಗರೆದವು ಆಲಸ್ಯದಿಂದ ಅಪರಾಧವಾದೀತೆಂದು ಸಂಭ್ರಮದಿಂದ ಸುಂದರಿಯರು ಕುಂಡಲಶೋಬಿತ ಗಂಡಸ್ಥಲಕಾಂತಿಯುತರಾಗಿ ಮಂದಹಾಸವನ್ನು ಬೀರುತ್ತ ಬಂದರು. ನಟರಾಡಿದರು. ಗಂದರ್ವರು ಪಾಡಿದರು ಸೂತಮಾಗದವಂದಿಗಳು ಉತ್ತಮಶ್ಲೋಕನ ಅದ್ಭುತ ಚರಿತೆಗಳನ್ನು ಪೊಗಳಿ ಕೀರ್ತಿಸಿದರು ಶ್ರೀಕೃಷ್ಣನು ಬಂದು ಪೌರ ಬೃತ್ಯವರ್ಗದವರನ್ನು ಯಥಾಯೋಗ್ಯವಾಗಿ ವಿನಯದಿಂದ ಕೆಲವರನ್ನು ನಮಿಸಿ ಹಿರಿಯರನ್ನು ಆಲಿಂಗಿಸಿ ಸಮರನ್ನು ಕೈಕುಲುಕಿಸಿ ಮಿತ್ರರನ್ನು ನಗುತ್ತ ನೋಡಿ ಮಿಕ್ಕ ಜನರನ್ನು ಸತ್ಕರಿಸಿದನು ಆಚಂಡಾಲಾಂತವಾದೆಲ್ಲ ಜನತೆಗೂ ಅಬಯವನ್ನು ನೀಡಿದನು ಗುರುವಿಪ್ರವೃದ್ಧರ ಆಶೀರ್ವಚನವನ್ನು ಪಡೆದನು ರಾಜಮಾರ್ಗದಿಂದ ಪುರಪ್ರವೇಶ ಮಾಡಿದನು ದ್ವಾರಕೆಯ ಕುಲಕಾಮಿನಿಯರಾ ಗೋವಿಂದನ ಸಂದರ್ಶನವನ್ನು ಮಾಡಲು ಮಂದಿರಾಗ್ರ ಬಾಗಗಳನ್ನೇರಿ ಕಣ್ಣಾರೆ ಕಂಡು ಆನಂದಿಸಿದರು ನಿತ್ಯವೂ ನೋಡುತ್ತಿದ್ದರೂ ದ್ವಾರಕಾವಾಸಿಗಳು ಆ ರಮಾವಾಸನಾದ ವಾಸುದೇವನನ್ನೆಷ್ಟು ನೋಡಿದರೂ ತೃಪ್ತರಾಗದೇ ಇಂತೆಂದುಕೊಂಡರು 'ಸಕಲೈಶ್ವರ್ಯಪ್ರದಾತ್ರಿಯೂ ಜಗದ್ಧಾತ್ರಿಯೂ ಆದ ಇಂದಿರೆಯು ಇವನ ವಕ್ಷವನ್ನು ಸೇರಿದಳು ಲಾವಣ್ಯ ಸುಧಾಪಾತ್ರ ವಾದೀ ಸುಂದರನ ಮುಖವನ್ನು ಜನನೇತ್ರ ಚಕೋರಗಳಾದುಕೊಂಡವು. ಬಯಹರ ಬಾಹು ದಂಡಗಳನ್ನು ಲೋಕಪಾಲರು ನಂಬಿ ನಿಂತರು ಬ್ರಹ್ಮಾದಿಗಳು ಇವನ ಪಾದಾಂಬುಜವನ್ನು ಆಶ್ರಯಿಸಿದರು ನಮ ಗಾದರೂ ಅದೇ ಗತಿ' ಎಂದು ಕೊಂಡಾಡಿ ಪುಷ್ಪವೃಷ್ಟಿಯನ್ನಾವೃಷ್ಣಿ ವರನ ಶಿರದಿ ಕರೆದರು. ಆಗ ಜಲಜಾತಾಕ್ಷನು ಧವಳಚ್ಛತ್ರದಿಂದ, ಚಾಮರಗಳಿಂದ, ಪುಷ್ಪವರ್ಷದಿಂದ, ತಾನುಟ್ಟ ಪೀತಾಂಬರದಿಂದ, ಧರಿಸಿದ ವನಮಾಲೆಯಿಂದಲೂ, ಕ್ರಮವಾಗಿ, ಸೂರ್ಯನಿಂದ, ಚಂದ್ರದ್ವಯದಿಂದ, ನಕ್ಷತ್ರರಾಜಿಯಿಂದ, ಮಿಂಚಿನಿಂದ, ಇಂದ್ರಚಾಪದಿಂದಲೆಸಗುವ ನೀಲಮೇಘದಂತೆ ವಿರಾಜಿಸಿದನು

ಆಗ ದೇವಕೀವಸುದೇವರ ಮನೆಯನ್ನು ಹೊಕ್ಕು ಅವರಿಗೆ ನಮಿಸಿ, ಶ್ರೀಕೃಷ್ಣನು ಅವಳನ್ನಾಲಿಂಗಿಸಿ ಸಂತೈಸಿದನು ಸಪ್ತಸಪತ್ನೀ ಮಾತೆಯರಿಗೂ ನಮಿಸಿದನು ಅವರು ಹರಿಯನ್ನಂಕದಲ್ಲಿಟ್ಟು ಸ್ನೇಹದಿಂದ ಹರಿದುಬಂದ ಸ್ತನ್ಯದಿಂದಲೂ ಹರ್ಷೋದ್ರೇಕದಿಂದ

ಹರಿದುಬಂದ ಬಾಷ್ಪಜಲದಿಂದಲೂ ತೊಯಿಸಿ ಸಮ್ಮಾನಿಸಿದರು

ಅನಂತರ ರಮಾಕಾಂತನು ಅಷ್ಟೋತ್ತರಶತಸಹಿತ ಷೋಡಶಸಹಸ್ರ ಕಾಂತೆಯರ ಶುದ್ಧಾಂತಬವನವನ್ನೊಂದೇಸಲ ತಾವದ್ರೂಪವಾಗಿ ಪೊಕ್ಕನು. ಪ್ರವಾಸದಿಂದ ಬಂದ ಗೋವಿಂದನ ಸಂದರ್ಶನವು ಅವರಿಗೆ ಮಹೋತ್ಸವವಾಯಿತು ಮೇಲಕ್ಕೆದ್ದು ಎದುರ್ಗೊಂಡು ಲಜ್ಜಾಚಕಿತರಾಗಿಯೂ ಎವೆಯಿಕ್ಕದೇ ನೋಡುತ್ತಾ ನಿಂತರು ಮಕ್ಕಳನ್ನು ಆಲಿಂಗಿಸಿ ಚುಂಬಿಸಿದ ಕೃಷ್ಣನನ್ನು ಮನಸಾ ಆಲಿಂಗಿಸಿ ಚುಂಬಿಸಿದರು. ತಡೆದರೂ ಬಿಡದೆ ನೇತ್ರಗಳಿಂದ ಬಾಷ್ಪಬಿಂದುಗಳು ತಾವಾಗಿ ಉರುಳಿ ಕಪೋಲಶೋಬೆಯನ್ನು ತುಂಬು ತ್ತಿರಲು ಒರೆಸದೆ ತಮ್ಮರಸನನ್ನು ಕಂಡು ನಿತ್ಯನೂತನವಾದ ಅವನ ಪಾದಾಂಬುಜಧ್ಯಾನ ದಿಂದ ಆನಂದಪುಲಕಿತರಾದರು. ಅನ್ಯತ್ರ ಚಂಚಲಳಾದರೂ ಇಂದಿರೆಯು ಅವನ ಸುಂದರ ಪಾದಾರವಿಂದವನ್ನು ಅರೆಕ್ಷಣವೂ ಬಿಟ್ಟಿರಲಾರಳೆಂತಹ ಪುರುಷೋತ್ತಮನ ದರ್ಶನವು ಯಾರಿಗೆ ತಾನೇ ಸಾಕೆನಿಸುವದು? ಇಂತು ಭೂಬಾರಬೂತದುಷ್ಟ ರಾಜನ್ಯರೂಪರಾದ ಅಸುರರ ಅಸಂಖ್ಯಾತ ಬಲವನ್ನು ತಾನು ನಿರಾಯುಧನಾದರೂ ಪರಸ್ಪರ ಸಂಘರ್ಷಣದಿಂದ ವೇಣುವೃಂದದಿ ವಹ್ನಿಯನ್ನು ಹೊತ್ತಿಸಿ ವನಂಗಳ ಸುಡುವ ವಾಯುವಿನಂತೆ ನಾಶಗೊಳಿಸಿ ವಾಸುದೇವನು ಶಾಂತನಾದನು. ಅಂತಹ ಪ್ರಬುವರನು ಕಾಂತಾಜನಮದ್ಯದಿ ಪ್ರಾಕೃತ ಮನುಜನಂತೆ ಸಂಚರಿಸಿದನು. ಅವನ ಮಾಯೆಯನ್ನಾರು ತಿಳಿಯಲಾದೀತು?

ಯಾರ ಸುಂದರ ಮಂದಹಾಸ, ಹಾವಬಾವ ವಿಲಾಸ, ದರ್ಪದ ಕುಡಿಗಣ್ಣ ನೋಟ, ವಕ್ಷಃಕೂಟಗಳನ್ನು ಕಂಡು ಮದನನೇ ವಿವಶನಾಗಿ ಕರಗತಪುಷ್ಪಚಾಪವನ್ನು 'ಪಂಚಬಾಣ ಗಳಿದ್ದೂ ಪಂಚಮುಖನ ಗೆಲ್ಲಲಾಗದೆ ಬೂದಿಯಾದನಾನಿಂದು ಈ ಸುಂದರಿಯರ ಸಹಾಯದಿಂದ ಚಾಪಾದಿ ಸಾದನಗಳಂ ಬಿಟ್ಟು ತ್ರಿಲೋಕವನ್ನೂ ಜಯಿಸಿ, ವಶೀಕರಿಸಿ ಕೊಂಬುವೆ'ನೆಂದು ಬಗೆದನೆಂಬಂತೆ ದೂರ ಜಾರಿ ಬಿಸುಟನೋ, ಅಂತಹ ವಿಲಾಸವತಿಯರಾ ಸ್ವರತನಾದ ಹರಿಯ ಮನೋವಿಕಾರವಂ ಪುಟ್ಟಿಸಲಾಗದೆ ಪೋದರು ಇಂತಹ ಶ್ರೀಕೃಷ್ಣ ನನ್ನು ಸ್ತ್ರೀಜಿತನೆಂದು ತಿಳಿದವರ ಮೂರ್ಖತೆಗೇನೆನ್ನಬೇಕು? ಸಾಮಾನ್ಯ ಮನುಜನೇ ಸಾತ್ವತಪುಂಗವನಾದ ಶ್ರೀಕೃಷ್ಣ? ಪ್ರಕೃತಿಯಲ್ಲಿ ಪ್ರೇರಕನಾಗಿದ್ದೂ ಅದರ ಲೇಪ- ಲೋಪಗಳಿಲ್ಲದ ಶ್ರೀಹರಿಯೇ ಸರ್ವೇಶ್ವರನು! ಶೌನಕಾ! ನೋಡು ಹರಿಪದರತರಾದ ಸುಜನರ ಬುದ್ಧಿಯು ಮನಃಕೃತಮಾಲಿನ್ಯದಿಂದ ದೂರವಾಗಿ ಪ್ರಕೃತಿಬಂಧಮೋಚಕ ವಾಗುವುದೆಂದ ಮೇಲೆ ಸಾಕ್ಷಾತ್ ಶ್ರೀಹರಿಯ ಪರಮೋತ್ಕರ್ಷವಿನ್ನೆಷ್ಟು? ಅಂತಹ ದೇವದೇವನಾದ ದೇವಕೀನಂದನನು ಸ್ತ್ರೈಣನೆಂದೂ, ತಮ್ಮಂತೆ ಮನುಜನೆಂದೂ ತಿಳಿದವರಿ ಗಿಂತ ಮೂಡರುಂಟೇ? ತಾಮಸ-ರಾಜಸರೇ ಅವನನ್ನಿಂತು ತಿಳಿದು ಕೆಡುವರು ಸಾತ್ವಿಕರು ಯದಾಮತಿ ಅವನ ಅನಂತಕಲ್ಯಾಣಗುಣಗಳನ್ನು ಭಜಿಸಿ ಮೋಕ್ಷಸಾಮ್ರಾಜ್ಯಸೌಖ್ಯವಂ ಬುಜಿಸುವರು.

## ೧೧ ಪರೀಕ್ಷಿಜ್ಜನ್ಮ

ಶೌನಕನು ಪುನಃ ಪ್ರಶ್ನಿಸಿದನು

ಅಶ್ವತ್ಥಾಮನ ಬ್ರಹ್ಮಾಸ್ತ್ರದ ಬಯಂಕರ ತೇಜದಿಂದ ಉತ್ತರೆಯ ಗರ್ಬಗತನಾದ ಅರ್ಬಕನು ಮೃತಕಲ್ಪನಾಗಲು ಶ್ರೀಶನು ಪುನಃ ಅವನನ್ನು ರಕ್ಷಿಸಿದನೆಂದು ಕೇಳಿದೆವು ಆ ಮಹಾನುಬಾವನಾದ ಪರೀಕ್ಷಿತನ ಜನ್ಮವೃತ್ತಾಂತವನ್ನು ಮರಣಕಾರಣವನ್ನು ಅವನು ಪೊಂದಿದ ಪುಣ್ಯಲೋಕದ ವಿವರವನ್ನೆಮಗೆ ಪೇಳು ಸೂತಾ! ಶ್ರೀಶುಕನವನಿಗೆ ಉಪದೇಶ ವನ್ನಿತ್ತನಂತೆ ಅವನ ಕದೆಯನ್ನು ಶ್ರದ್ದೆಯಿಂದ ಕೇಳುವೆವೆನ್ನಲು ಸೂತನು ಹೇಳಲು ಉಪಕ್ರಮಿಸಿದನು.

ದರ್ಮರಾಜನು ಪ್ರಜರನ್ನು ತಂದೆಯಂತೆ ರಂಜಿಸುತ್ತಾ ರಾಜ್ಯವನ್ನಾಳಿದನು ಕೃಷ್ಣ ಪಾದಸೇವೆಯ ಮಾದುರ್ಯವನ್ನು ಕಂಡ ಆತನಿಗೆ ಇತರ ಸರ್ವಕಾಮಗಳು ಕಹಿಯಾಗಿ ತೋರಿದವು ಶೌನಕಾದಿ ದ್ವಿಜರೇ! ಸಂಪತ್ತು, ಯಜ್ಞಯಾಗಾದಿಗಳು, ವೀರಸೋದರರು, ಮಹೀಮಂಡಲ ಸಾಮ್ರಾಜ್ಯವು, ಮಹಿಷಿಯರು, ನಾಕವನ್ನು ಮುಟ್ಟಿ ಮೆರೆದ ಕೀರ್ತಿಯು ಎಲ್ಲವೂ ಇದ್ದೂ ಮುಕುಂದ ಪಾದಾರವಿಂದಾಸಕ್ತನಾದ ದರ್ಮರಾಜನಿಗೆ, ಹಸಿವಾದವನಿಗೆ ವೀಣಾಸ್ರಕ್ಚಂದನಗಳಂತೆ ಸಂತೋಷಕರವಾಗಲಿಲ್ಲ

ಹಿಂದೆ ನಾ ಪೇಳಿದಂತೆ ಮಾತೃಗರ್ಬಗತನಾದ ಬಾಲಕನು ಬ್ರಹ್ಮಾಸ್ತ್ರದಿಂದ ಪೀಡಿತನಾಗುತ್ತಾ ತನ್ನನ್ನಾ ಅಸ್ತ್ರತೇಜದಿಂದ ರಕ್ಷಿಪ ಲೋಕವಿಲಕ್ಷಣನಾದೊಬ್ಬ ಪುರುಷ ನನ್ನು ಕಂಡು ವಿಸ್ಮಿತನಾದನು ಅಂಗುಷ್ಟಮಾತ್ರದೇಹನು, ನಿರ್ಮಲನು, ಹೇಮಕಿರೀಟ ವನಮಾಲಾ ಬೂಷಿತನು, ಷೋಡಶವರ್ಷಪ್ರಾಯನು, ಶ್ಯಾಮನು, ಮಂದಹಾಸನು ಆದ ಅಚ್ಯುತನವನಿಗೆ ತನ್ನ ದಿವ್ಯದರ್ಶನವನ್ನು ಕೊಟ್ಟನು ಶ್ರೀಹರಿಯ ಶ್ರೀಮದ್ವೀರ್ಯ ಚತುರ್ಬಾಹುವಿಲಸಿತಮಾದ, ಕಾಂಚನಕುಂಡಲವಿಭ್ರಾಜಿತಮಾದ, ಕಮಲಾರುಣಕಟಾಕ್ಷ ಮಾದ ಆ ರೂಪವನ್ನು ನೋಡಿ ಯಾರಿವನೆಂದು ಚಿಂತಿಸಿದನು ಗದಾದಂಡವನ್ನು ಗಿರ ಗಿರನೇ ತಿರುಪುತ್ತಾ ಬ್ರಹ್ಮಾಸ್ತ್ರವನ್ನಡಗಿಸಿ, ತನ್ನ ಸುತ್ತು ತಿರುಗುತ್ತಿರುವಸಿವನು ಅದೋಕ್ಷಜನೇ ಅಹುದೆಂದು ನಿರೀಕ್ಷಿಸಿ, ನಿಶ್ಚಯಿಸಿದನು ಆದ್ದರಿಂದಲೇ ಆ ಬಾಲಕನನ್ನು ಪರೀಕ್ಷಿತನೆಂಬರು

ದರ್ಮರಕ್ಷಕನಾದ ಶ್ರೀಹರಿಯು ಹತ್ತುತಿಂಗಳಾಗರ್ಬವನ್ನು ಪರಿರಕ್ಷಿಸಿ ಅಲ್ಲೇ ಅಂತರ್ಹಿತನಾದನು ಆಗ ಗ್ರಹಗಳು ಲಗ್ನಾದಿ ಶುಬಸ್ಥಿತಿಯಲ್ಲಿರಲು ಶುಬಮುಹೂರ್ತ ದಲ್ಲಿ ಎರಡನೇ ಪಾಂಡುರಾಜನಂತೆ ಪಾಂಡವ ವಂಶಾಂಕುರನಾದ ಆ ಬಾಲಕನು ಜನಿಸಿದನು. ದರ್ಮರಾಜನು ಪ್ರೀತನಾಗಿ ದೌಮ್ಯಾದಿ ಪುರೋಹಿತರಿಂದ ಕೂಡಿ ಸ್ವಸ್ತಿಯ ಮಾಡಿಸಿ ಜಾತಕರ್ಮವನ್ನು ನಡೆಸಿದನು ಕನಕ-ರಜತರಾಶಿಯನ್ನು ಕರಿತುರಗಾದಿಗಳನ್ನು ಗ್ರಾಮಾ ರಾಮಗಳನ್ನು ಸುವಿಪ್ರರಿಗೆ ಮೃಷ್ಟಾನ್ನವನ್ನುಣಿಸಿ ದಾನ ಮಾಡಿದನು ಪಾತ್ರವನ್ನರಿತು ದಾನದಾರೆಯಂ ಬಿಟ್ಟ ಮಹಾರಾಜನನ್ನು ಕಂಡು ಸಂತುಷ್ಟರಾದ ಬ್ರಾಹ್ಮಣರು "ಮಹಾ ರಾಜಾ! ಈ ನಿನ್ನ ಪೌತ್ರನು ದೈವಕರುಣೆಯಿಂದ ಬದುಕಿರುವನು ನಿನ್ನ ವಂಶವು ನಿಲ್ಲುವಂತೆ

ನಿಮ್ಮಲ್ಲಿ ಅನುಗ್ರಹವನ್ನು ಮಾಡಿದ ಶ್ರೀಕೃಷ್ಣನಿಂದ ರಕ್ಷಿತನಾದ್ದರಿಂದ ಇವನಿಗೆ ಪರೀಕ್ಷಿತ ನೆಂಬ ಹೆಸರನ್ನಿಡುವೆವು ಇವನು ಕೀರ್ತಿಶಾಲಿಯು ಬಗವದ್ಬಜನಶಾಲಿಯು ಆಗುವ"ನೆಂದು ಹೇಳಲಾಗಿ ವಿನಯಾನತ ಕಂದರನಾದ ದರ್ಮಜನು ಪುನಃ ಕೇಳಿಕೊಂಡನು

"ಸ್ವಾಮಿ! ಈ ನನ್ನ ಪೌತ್ರನು ನಮ್ಮ ಪೂರ್ವಜರಾದ ಪುಣ್ಯಶ್ಲೋಕರು ನಡೆದ ಮಾರ್ಗ ದಲ್ಲಿ ಅವರಂತೆ ನಡೆಯುವನೇ? ಯಶಸ್ಸನ್ನು ಗಳಿಸುವನೇ? ಒಳ್ಳೆಯವನೆನಿಸುವನೇ?"

ಎನ್ನಲು ಪುನ ಬ್ರಾಹ್ಮಣರು ಹೇಳಿದರು

"ಪಾರ್ದ! ಇಕ್ಷ್ವಾಕುವಿನಂತೆ ಪ್ರಜಾರಕ್ಷಕನಾಗುವನೀ ನಿನ್ನ ಮೊಮ್ಮಗನು ದಶರದ ರಾಜನಂತೆ ಸತ್ಯಸಂದನು ಬ್ರಾಹ್ಮಣಪ್ರಿಯನು ಆಗುವನು ಕಾರ್ತವೀರ್ಯನೋ ಅರ್ಜುನನೋ ಎನಿಸುವನು ದನುರ್ವಿದ್ಯೆಯಲ್ಲಿ. ದುಷ್ಯಂತಪುತ್ರ ಬರತನಂತೆ ಯಶೋ ವಿಶಾಲನು, ಅಗ್ನಿಯಂತೆ ದುರ್ದರ್ಷನು, ಸಮುದ್ರನಂತೆ ದುಸ್ತರನು, ಸಿಂಹದಂತೆ ಪರಾ ಕ್ರಮಿಯು, ಹಿಮವಂತನಂತೆ ಸೇವ್ಯನು, ಬೂದೇವಿಯಂತೆ ಕ್ಷಮಾಶಾಲಿಯು, ಮಾತಾಪಿತೃ ಗಳಂತೆ ಅಪರಾದ ಸಹನಶೀಲನು, ಬ್ರಹ್ಮನಂತೆ ಸಮಂಜಸನು, ಶಿವನಂತೆ ಅನುಗ್ರಹ ಕರ್ತನೂ, ರಮಾಶ್ರಯನಾದ ದೇವನಂತೆ ಸರ್ವಬೂತಾಶ್ರಯನಾಗುವನು. ಸಜ್ಜನಬೂಷಣ ವೆನಿಸಿದ ಸದ್ಗುಣಗಳುಳ್ಳ ಇವನು ಶ್ರೀಕೃಷ್ಣನನ್ನು ಅರ್ಜುನನನ್ನು ಹೋಲುವನು ರಂತಿದೇವನಂತೆ ಉದಾರನು ಯಯಾತಿಯಂತೆ ದಾರ್ಮಿಕನು ಆಗಿ ಈ ವಂಶತಿಲಕನು ಬಲಿಯ ದೈರ್ಯವನ್ನು ಪ್ರಹ್ಲಾದನ ಬಕ್ತಿಯನ್ನು ಅನುಕರಿಸುವನು ಅಶ್ವಮೇದ ಯಜ್ಞ ಗಳನ್ನು ಮಾಡುವನು ಗುರುಹಿರಿಯರನ್ನು ಸೇವಿಸುವನು. ರಾಜರ್ಷಿಗಳನ್ನು ಕುಮಾರ ರನ್ನಾಗಿ ಪಡೆಯುವನು ದುರ್ಮಾರ್ಗರ ಕುಕೃತ್ಯಂಗಳ ತಡೆವನು ಭಗವಂತನಾದ ದರ್ಮ ನಿಗೆ ದ್ರೋಹವನ್ನು ಬಗೆವ ಕಲಿಯನ್ನು ನಿಗ್ರಹಿಸುವನು ಕೊನೆಗೊಂದು ಮಾತು ಕೇಳು ಧರ್ಮರಾಜಾ! ಬ್ರಾಹ್ಮಣ ಬಾಲಕನ ಶಾಪದಿಂದ ಪ್ರೇರಿತನಾಗಿ ಬಂದ ತಕ್ಷಕನಿಂದ ಮೃತ್ಯು ವೆಂದರಿತು ಸಕಲ ದುಸ್ಸಂಗವನ್ನು ಬಿಟ್ಟು ಹರಿಪದವನ್ನು ಪೊಂದುವನು ಹರಿಪದಜಾತ ಯಾದ ಬಾಗೀರದೀತೀರದಲ್ಲಿ ಋಷಿಸಬಾ ಸದನದಲ್ಲಿ ಶ್ರೀಶುಕನಿಂದ ಪರಮಾತ್ಮನ ಮಹಿಮೆಯನ್ನಾಲಿಸಿ ಪರಾಪರ ತತ್ತ್ವಜ್ಞಾನದಿಂದ ಕಳೇವರವನ್ನು ತ್ಯಜಿಸಿ ಮೋಕ್ಷವನ್ನು ಪಡೆಯುವನು" ಎಂದು ಜಾತಕ ಕೋವಿದರಾದ ದ್ವಿಜರು ರಾಜನಿಗೆ ಹೇಳಿ, ಸತ್ಕೃತರಾಗಿ ಹೊರಟುಹೋದರು ಸರ್ವದೃಷ್ಟಿಯಿಂದ ಪರೀಕ್ಷೆಯನ್ನು ಮಾಡಿ ನೋಡುತ್ತಲಿದ್ದರಿಂದ ಪರೀಕ್ಷಿತನೆಂದಾಬಾಲಕನು ಕೀರ್ತಿತನಾದನು

ಆ ರಾಜಪುತ್ರನು ಶುಕ್ಲಪಕ್ಷದಲ್ಲಿ ದಿಗ್ದೇಪ ಸರಸ್ವತೀ ಪ್ರಮುಖರಿಂದ ಪೂಜಿಸಲ್ಪಡುವ ಚಂದ್ರನಂತೆ ತನ್ನ ತಾತಂದಿರ ಪೋಷಣೆಯನ್ನು ಪಡೆದು ದಿನ ದಿನ ಪ್ರವರ್ದ ಮಾನನಾದನು

ಅಶ್ವಮೇದವನ್ನು ಮಾಡಲೆಣಿಸಿದ ಧರ್ಮರಾಜನು ಕಪ್ಪಕಾಣಿಕೆಗಳು ದಂಡಲಬ್ದ ದನವು ಸಾಲದೇ ಜ್ಞಾತಿದ್ರೋಹಪಾಪವೆಂದು ಕಳೆಯುವುದೆಂದು ಚಿಂತಿಸುತ್ತಿರಲು ವ್ಯಾಸರು ಹೇಳಿದಂತೆ ಬೀಮಾದಿಗಳು ತಮ್ಮ ಪೂರ್ವಜನಾದ ಮರುದ್ರಾಜನು ಸ್ಥಾಪಿಸಿದ ಅಪಾರದನ ವನ್ನು ತೆಗೆದು ತಂದರು ನಾಲ್ಕು ದಿಕ್ಕಿನಲ್ಲಿರುವ ರಾಜರಿಂದ ಕಾಣಿಕೆಯಾಗಿ ಬಹುದನವು

ಬರಲು ದರ್ಮರಾಜನು ಸಂತೋಷವಟ್ಟು, ಯಜ್ಞಕ್ಕೆ ಬೇಕಾಗುವ ಸಂಬಾರಗಳನ್ನು ಸಂಪಾದಿಸಿದನು. ತ್ರಿಗುಣವಲಕವಾದ ಪಂಚವಾಜಿಮೇದಗಳಂ ಮಾಡಿ ಹರಿಗರ್ಪಿಸಿದನು ಶ್ರೀಕೃಷ್ಣನು ಸಾಕ್ಷಾತ್ತಾಗಿ ಬಂದು ದ್ವಿಜರಿಂದ ಯಜ್ಞಗಳನ್ನು ನಾಂಗಗೊಳಿಸಿ, ರಾಜನ ಅಪ್ಪಣೆಯಂ ಪಡೆದು ಯಾದವರನ್ನೂ ಅರ್ಜುನನನ್ನೂ ಕರೆದುಕೊಂಡು ದ್ವಾರಾವತಿಗೆ ಹೊರಟನು

## ೧೨ ವಿದುರಬೋಧೆ

ವಿಷಯರಾಗವು ಸಂಸಾರಕಾರಣವು ವಿರಾಗವೇ ಮುಕ್ತಿಕಾರಣವು ಶುದ್ಧಾಂತಃ ಕರಣನಾದವನಿಗೆ ವಿರಾಗವು ದೃಡವಾಗಿ ನಿಲ್ಲುವಂತಹ ಬುದ್ಧಿಯು ಸತ್ಕರ್ಮಾನುಷ್ಠಾನ ದಿಂದಲೂ ತೀರ್ದಯಾತ್ರೆಯಿಂದಲೂ ಲಬಿಸುವದು ವಿದುರನು ತೀರ್ದಯಾತ್ರೆಯನ್ನು ಮುಗಿಸಿ ಹಸ್ತಿನಾವತಿಗೆ ಬಂದನು ಮೈತ್ರೇಯರ ಉಪದೇಶದಿಂದ ಪೂತನಾಗಿ ಪರಬ್ರಹ್ಮ ವಿದ್ಯೆಯಿಂದ ಪೂರ್ಣನಾಗಿ ಅಲಂಬುದ್ಧಿಯನ್ನು ಪೊಂದಿ ಶಾಂತನಾಗಿದ್ದನು.

ಬಂದ ಬಂಧುವನ್ನು ಕಂಡು ದರ್ಮರಾಜನು ಅನುಜರಿಂದ ಕೂಡಿ ಎದುರ್ಗೊಂಡು ಕರೆತಂದನು. ದೃತರಾಷ್ಟ್ರ ಸಂಜಯ ಕೃಪ ಕುಂತೀ ಗಾಂದಾರೀ ದ್ರೌಪದೀ ಸುಬದ್ರಾದಿ ಪಾಂಡುರಾಜನ ಬಳಗವವನಿಗೆ ಸ್ವಾಗತವನ್ನು ಕೊಟ್ಟು ಸತ್ಕರಿಸಿತು. ದರ್ಮರಾಜನು ಪ್ರೇಮಬಾಷ್ಪಪೂರಿತನಯನನಾಗಿ, ಆಸನವನ್ನು ಕೊಟ್ಟು, ಬೋಜನಾದಿಗಳಿಂದ ಸಂತೈಸಿ, ಸುಖಾಸೀನನಾದ ವಿದುರನನ್ನು ವಿನಯದಿಂದ ಕೇಳಿಕೊಂಡನು

"ಪೂಜ್ಯನೇ! ನಿನ್ನ ಸಹಾಯದಿಂದ ಅನೇಕ ಕಷ್ಟಗಳಿಂದಲೂ ವಿಷಾಗ್ನಿಗಳಿಂದಲೂ ನಾವೂ ನಮ್ಮ ತಾಯಿಯೂ ಪಾರಾಗಿ ಬದುಕಿದೆವು ಏಕಾಂತಬಕ್ತನಾದ ನೀನೀ ಕ್ಷಿತಿಮಂಡಲ ವನ್ನು ಯಾತ್ರೆಗೆಂದು ಸಂಚರಿಸುವಾಗ ಹೇಗೆ ಜೀವಿಸಿದೆ? ನೀನು ನೋಡಿದ ಕ್ಷೇತ್ರಗಳು ಆವುವು? ಮಿಂದ ತೀರ್ದಗಳಾವುವು? ನಿಮ್ಮಂತಹ ಭಾಗವತರು ಸ್ವಯಂ ಪವಿತ್ರರೇ ಆಗಿಹರು. ಆದರೂ ತೀರ್ದಗಳು ಕೂಡ ನೀವು ಬಂದು ಮಿಂದು ಪೋಗುವುದರಿಂದ ನಿಮ್ಮ ಅಂತರ್ಯಾಮಿ ಗದಾದರನಿಂದ ನಾವೇ ಪವಿತ್ರವಾದೇವೆಂದು ಕಾದಿರುವವು! ಕೃಷ್ಣಪಾದಾಶ್ರಯರಾದ ನಮ್ಮ ಬಂದುಜನರನ್ನು ಕಂಡೆಯಾ? ಅವರ ವಾರ್ತೆಯೇನು? ದ್ವಾರಾವತಿಯಲ್ಲೆಲ್ಲ ಸುಖದಿಂದಿರುವರೇ?" ಎಂದು ಕೇಳಲು ವಿದುರನು ತನ್ನ ಅನುಬವ ಗಳನ್ನೆಲ್ಲಾ ಹೇಳಿದನಾದರೆ, ಯದುಕುಲಕ್ಷಯವಾಗುವುದೆಂದು ಪೇಳಿದರೆ, ಇವರು ದುಃಖ ಪಡುವರು. ಅದನ್ನು ನೋಡಲಾರೆನೆಂದುಕೊಂಡು ದುರ್ವಿಷಹವಾದ ಆ ವೃತ್ತಾಂತವನ್ನು ಪೇಳಲಿಲ್ಲ. ಮರಣವೆಲ್ಲರಿಗೂ ಅನಿವಾರ್ಯವೇ ಆದರೂ ಪ್ರಿಯಜನರ ಬವಿಷ್ಯಸ್ಮರಣ ಕಥೆಯು ಕದನೀಯವಲ್ಲವೆಂದು ಕರುಣೆಯಿಂದ ಮಿಕ್ಕ ಸಮಾಚಾರವನ್ನು ಪೇಳಿಕಳುಹಿದನು ಪಾಂಡವರ ಸತ್ಕಾರ ಸೌಖ್ಯವನ್ನನುಬವಿಸುತ್ತಾ ಕೆಲಕಾಲವಿದ್ದನು ಪ್ರತಿದಿನವೂ ಅಣ್ಣನಾದ ದೃತರಾಷ್ಟ್ರನಿಗೆ ಶ್ರೇಯವಾಗಲು ಚಿಂತಿಸಿ ವಿದುರನು ಹಿತೋಪದೇಶವನ್ನು ಮಾಡುತ್ತಿದ್ದನು

ಮಾಂಡವ್ಯರ ಶಾಪದಿಂದ ಶೂದ್ರಯೋನಿಯಲ್ಲಿ ಜನಿಸಿದ ಸಾಕ್ಷಾದ್ಯಮದರ್ಮ ನಲ್ಲವೇ ವಿದುರನು! ಒಂದು ನೂರು ವರ್ಷ ವಿದುರನಾಗಿದ್ದು ಅನಂತರ ದರ್ಮರಾಜನಲ್ಲಿ

ಲಯವನ್ನು ಪೊಂದಿದನು ಲಬ್ದರಾಜ್ಯನಾಗಿ ದರ್ಮಜನು ಲೋಕಪಾಲರಂತಿರುವ ತಮ್ಮಂದಿರು ಸೇವಿಸುತ್ತಿರಲು ಕುಲಂದರನಾದ ಮೊಮ್ಮಗನಂ ಕಂಡು ಆನಂದತುಂದಿಲನಾಗಿದ್ದನು ಆಗ ಶ್ರೀಕೃಷ್ಣನು ಅವರೆಲ್ಲರ ಅಪ್ಪಣೆಯನ್ನು ಪಡೆದು ಅರ್ಜುನೋದ್ದವ ಸಾತ್ಯಕಿಯರಿಂದ ಕೂಡಿ ದ್ವಾರಕೆಗೆ ಹೊರಟುಹೋದನು

ಇಂತು ಗೃಹಕೃತ್ಯಾಸಕ್ತರಾಗಿ ಪೈಪುರೆತು ಜೀವಿಸುತ್ತಿರಲು ಪರಮದುಸ್ತರವಾದ ಕಾಲವು ತಿಳಿಯದಂತೆಯೇ ಕಳೆದುಹೋಯಿತು ವಿದುರನಿದನ್ನರಿತನು ಅಣ್ಣನಲ್ಲಿ ಬಂದು ಇಂತೆಂದನು

"ರಾಜನ್! ಹೊರಡು ಇಲ್ಲಿರಬೇಡ ಮರಣಬಯಪೆಮ್ಮ ಬೆನ್ನಟ್ಟಿ ಬರುವುದು ಕಾಣಲಿಲ್ಲವೇ? ಎಲ್ಲಿಂದಲಾದರೂ ಯಾವ ರೀತಿಯಿಂದಲೂ ಮರಣಕ್ಕೆ ಪ್ರತಿಕ್ರಿಯೆ ಉಂಟೇ? ಇಲ್ಲ ಇಂತಹ ಬಗವಂತನ ಅತ್ಯಂತ ಪರಾಕ್ರಮಿಯಾದ ಕಾಲಶಕ್ತಿಯನ್ನೇಕೆ ನೋಡದಿರುವೆ? ಮರಣವು ಒದಗಲು ಪ್ರಿಯತಮ ಪ್ರಾಣಗಳಿಗೆರವಾಗುವನೆಂದಮೇಲೆ ದನಾದಿಗಳುಳಿಯುವವೇ? ಹುಟ್ಟುಕುರುಡನಿರುವೆ ಶರೀರವು ಜರಾಗ್ರಸ್ತಮಾಯಿತು ಪುತ್ರಬ್ರಾತೃಸುಹೃಜ್ಜನರೆಲ್ಲರು ನಿನ್ನ ಮುಂದೆ ಸತ್ತರು ಆದರೂ ಪರರ ಮನೆಯಲ್ಲಿ ಜೀವಿಸಿರುವೆ! ಆಹಾ! ಜಂತುವಿಗೆ ಜೀವದಾಶೆಯು ಎಷ್ಟು ಉತ್ಕಟವಾಗಿರುವುದು! ನಿನಗೆ ರೋಷವಾದರೂ ಇರಬೇಡವೇ! ನಿನ್ನ ಪುತ್ರಹಂತಕನಾದ ಬೀಮಸೇನನು ಅನಾದರದಿಂದ ನಿನಗೆ ಕೊಡುವ ಎಡಗೈ ಪಿಂಡವನ್ನು ತಿಂದು ಬದುಕಬೇಕೆಂದಿರುವೆ! ಆದರೂ ಈ ನಿನ್ನ ದೇಹವು ನಿನ್ನ ಇಚ್ಛೆಯಿಲ್ಲದಿದ್ದರೂ ಬಿದ್ದುಹೋಗುವದು ಹರಿದ ಚಿಂದಿಯಂತೆ ಉರಿದು ಬೀಳುವ ಈ ಶರೀರದಿಂದೇನು ಪ್ರಯೋಜನವಂ ಕಂಡೆ? ಬಿಡು ದೇಹಾಬಿಮಾನವನ್ನು, ಕಡಿ ಬಂದುಸ್ನೇಹವನ್ನು ನಡೆ, ಹೊರಡುವ, ಹಿಮಾಲಯದ ಆಶ್ರಮ ಪ್ರದೇಶಗಳಿಗೆ! ಏಕಾಂತ ಬಕ್ತನಾಗು, ಹರಿಯನ್ನು ನಂಬು ಇನ್ನಾದರೂ ಒಳ್ಳೆಯ ಹಾದಿ ಹಿಡಿದಾಗಲೇ ದೀರನೆನಿಸುವೆ ಬಾಲಾಜನ ಶಾಲಾದನ ಲೀಲಾಪಸ, ಮೊದಲಾದ ವಿಬವದಲ್ಲಿ ಲೀನವಾದ ಮನಸ್ಸುಳ್ಳ ಮನುಜನನ್ನು ಕಾಲವು ನುಂಗುವುದೆಂದರಿತು ಮನೆಯನ್ನು ಬಿಡು-ಹೊರಡು"

ಎಂದು ವಿದುರನು ಹೇಳಲು ದೃತರಾಷ್ಟ್ರನು "ಅಹುದು ನಿಜ, ವಿದುರಾ ತಾನಾಗಿ ವೈರಾಗ್ಯವಂ ತಾಳಿದರೂ ಸರಿ! ಅದವಾ ನಿನ್ನಂತಹವರ ಆಪ್ತವಾಕ್ಯದಿಂದಲಾದರೂ ಸರಿ! ಹರಿಯನ್ನು ಹೃದಯದಿ ದರಿಸಿ ಮನೆಯನ್ನು ತ್ಯಜಿಸುವೆನು ವಿವಿಕ್ತ ಸ್ಥಲವನ್ನು ಸೇರಿ ಶ್ರೇಯಸ್ಕರವಾದ ತಪಸ್ಸನ್ನು ಮಾಡುವದೀಗ ನನ್ನ ಕರ್ತವ್ಯ ನಡೆ, ಇನ್ನು ಮುಂದಿನ ಕಾಲ ಕೆಟ್ಟದು. ಜ್ಞಾನೋಪದೇಶಕರೂ ಸಿಗಲಾರರು" ಎಂದು ಪ್ರಜ್ಞಾನೇತ್ರನಾಗಿ ತನ್ನವರಲ್ಲಿ ಸ್ನೇಹಪಾಶವನ್ನು ಕಡಿದು ವಿದುರೋಪದಿಷ್ಟಮಾರ್ಗದಲ್ಲಿ ನಡೆದುಕೊಂಡು ಹೋದನು ಸುಬಲಪುತ್ರಿಯು ಪತಿವ್ರತೆಯು ಆದ ಗಾಂದಾರಿಯೂ ವಿರಾಗಿಣಿಯಾದ ಕುಂತಿಯೂ ಅವನನ್ನು ಹಿಂಬಾಲಿಸಿ ಪೋದರು ದರ್ಮರಾಜನು ಬೇಡವೆಂದು ಕಾಲುಕಟ್ಟಿ ಅಂಗಲಾಚಿ ಬೇಡಿಕೊಂಡರೂ ಮೂರು ದಿನ ಹರೋಪವಾಸ ಮಾಡಿ ಅವರೆಲ್ಲರೂ ಪಾಂಡವರ ಅನುಜ್ಞೆಯನ್ನು ಪಡೆದೇ ಪೋದರು. ಮುಂದೆ ಮೂರು ವರ್ಷಕಾಲ ಬದರಿಕಾಶ್ರಮದಲ್ಲಿ

ವಾಸವಾಗಿದ್ದರು. ಒಂದು ಸಲ ಧರ್ಮರಾಜನವರನ್ನು ನೋಡಲು ಪೋದಾಗ ವಿದುರನು ಧರ್ಮರಾಜನಲ್ಲಿ ಐಕ್ಯವಂ ಪೊಂದಿದನು. ಅನಂತರ ಧೃತರಾಷ್ಟ್ರ-ಕುಂತೀ-ಗಾಂಧಾರಿಯರು ದಾವಾಗ್ನಿಯಲ್ಲಿ ದಗ್ಧರಾದರು.

ಧರ್ಮರಾಜನಾದರೂ ಪ್ರತಿದಿನ ಪ್ರಾತಃಕಾಲದಲ್ಲಿ ಧೃತರಾಷ್ಟ್ರ ದಂಪತಿಗಳು ಕೂಡುತ್ತಿದ್ದ ಸಿಂಹಾಸನಗಳಿಗೆ ನಮಸ್ಕರಿಸಿ, ಅವರನ್ನು ಮನಸಾ ಸ್ಮರಿಸಿ, ಮುಂದಿನ ಕಾರ್ಯಗಳನ್ನು ಮಾಡುತ್ತಿದ್ದನು. ಒಂದು ದಿನ ವಂದನೆಯಂ ಗೈದು ಸ್ಮರಿಸಿ ಪಿತೃಗಳು ತನ್ನ ಮನೋನೇತ್ರಗಳಿಗೆ ಕಾಣದಿರಲು ಚಿಂತಾಕ್ರಾಂತನಾಗಿ ಅಲ್ಲಿಗೆ ಬಂದಿದ್ದ ಸಂಜಯನನ್ನು ಕಂಡು ಇಂತರುಹಿದನು.

"ಸಂಜಯಾ! ಯಾವಾಗ ಬಂದೆ? ನಮ್ಮಪ್ಪನೆಲ್ಲಿ? ಕಣ್ಣಿಲ್ಲದ ತಂದೆ, ಮಕ್ಕಳನ್ನು ಕಳೆದುಕೊಂಡು ದುಃಖಿಸುತ್ತಿದ್ದ ತಾಯಿ, ಏನಾದರು? ಅವಿವೇಕದಿಂದ ನಾನು ಮಾಡಿದ ಪುತ್ರವಧೆ ಪಾಪವಂ ಸ್ಮರಿಸಿ ರೋದಿಸುತ್ತಾ ಗಂಗೆಯಲ್ಲಿ ಬಿದ್ದರೋ ಏನು? ಸೂತಾ! ನಮ್ಮ ತಂದೆ ಪಾಂಡುರಾಜನು ಮೃತನಾಗಲು ದಿಕ್ಕಿಲ್ಲದ ನಮ್ಮನ್ನು ಬಾಲ್ಯದಿಂದ ರಕ್ಷಿಸಿದರಲ್ಲವೇ? ಇಹಲೋಕವನ್ನೇ ಬಿಟ್ಟಿರುವರೇ? ಹೇಳು" ಎಂದು ಕೇಳಲು ಸಂಜಯನು ಸ್ನೇಹದಿಂದ ರೋದನವನ್ನು ಮಾಡುತ್ತಾ ಧೃತರಾಷ್ಟ್ರಾದಿಗಳನ್ನು ನೆನೆದು ಚಿಂತೆಯಿಂದ ಸುಮ್ಮನಿದ್ದನು. ಅನಂತರ ಕಣ್ಣೀರನ್ನೊರೆಸಿಕೊಂಡು ಮನವನ್ನು ಗಟ್ಟಿಮಾಡಿ ತನ್ನ ಪ್ರಭುವಾದ ಧೃತರಾಷ್ಟ್ರನ ಪಾದವನ್ನು ನೆನೆದು ಇಂತೆಂದನು.

"ರಾಜನ್! ನಿಮ್ಮ ತಂದೆತಾಯಿಗಳು ನನ್ನನ್ನೂ ಕೈಬಿಟ್ಟು ಪೋದರು. ಏನಾದರೆಂದು ಹೇಳಲಿ!" ಎನ್ನುವಾಗ ತುಂಬುರುನಿಂದ ಕೂಡಿ ನಾರದನು ತ್ರಿತಂತ್ರೀ ಮಧುರವಾದ ಮಹತಿ ವೀಣೆಯನ್ನು ಮೀಟುತ್ತಾ ಅಲ್ಲಿಗೆ ಬಂದನು. ರಾಜನರ್ಪಿಸಿದ ಅರ್ಘ್ಯಪಾದ್ಯಾದಿಗಳನ್ನು ಸ್ವೀಕರಿಸಿ ಆಸನದಲ್ಲಿ ಕೂತನು. ಆಗ ಧರ್ಮರಾಜನವನಿಗೆ ನಮಿಸಿ "ಬದರಿಕಾಶ್ರಮದಲ್ಲಿ ಬಿಟ್ಟು ಬಂದ ತಂದೆತಾಯಂದಿರ ಗತಿಯೇನು? ಪೂಜ್ಯರೇ! ಅವರೇನಾದರು? ಸಂಸಾರ ಸಾಗರದಲ್ಲಿ ಮುಳುಗಿ ಕಷ್ಟಪಡುವ ಜನರಿಗೆ ತಾವು ಕರ್ಣಧಾರನಂತೆ ರಕ್ಷಕರಾಗಿರುವಿರಿ" ಎಂದು ಬೇಡಿಕೊಂಡನು.

ನಾರದನಿಂತು ಪೇಳಿದನು. "ರಾಜನ್! ಈ ಜಗತ್ತೆಲ್ಲ ಹರ್ಯಧೀನವಾಗಿದೆ ಎಂಬುದನ್ನು ಮರೆತೆಯಾ? ಯಾರಿಗಾಗಿ ಶೋಕಪಡುವೆ? ನೀನಾರವರಿಗೆ? ಶ್ರೀಹರಿಯೇ ಭೂತಗಳನ್ನೊಂದೆಡೆ ಋಣಾನುಬಂಧದಿಂದ ಕಲೆಸುವನು. ಅವನೇ ಅಗಲಿಸುವನು. ತಮ್ಮ ಮುಗುದಾಣಿಯಿಂದಲೂ ಸಾಮೂಹಿಕ ಬಂಧಕ ರಜ್ಜುವಿನಿಂದಲೂ ಕಟ್ಟಿಹಾಕಲ್ಪಟ್ಟು ಕರ್ಷಕನ ಭಾರವಹನಾದಿ ಕಾರ್ಯರತವಾದ ಪಶುಗಳಂತೆ ನಾವೆಲ್ಲರೂ ವಿವಿಧವರ್ಣಾಶ್ರಮ ಧರ್ಮಗಳಿಂದಲೂ ಸಾಮಾನ್ಯ ಧರ್ಮಗಳಿಂದಲೂ ಬದ್ಧರಾಗಿ ಭಗವಂತನ ಸೇವಾನಿರತರಾಗಿರುವೆವು. ಬಾಲಕನಾಡಿಸುವ ಬೊಂಬೆಗಳಂತೆ ಅಸ್ವತಂತ್ರರಾದೆಮಗೆ ಸಂಯೋಗ ವಿಯೋಗಗಳಾ ಸರ್ವೋತ್ತಮನ ಇಚ್ಛೆಯಿಂದ ಒದಗುವವು. ಜೀವನು ನಿತ್ಯನಾದ್ದರಿಂದ ಜೀವನಿಗಾಗಿ ಶೋಕಪಡಬಾರದು. ದೇಹವು ಅನಿತ್ಯವೇ ಸರಿ ಎಂದ ಮೇಲೆ ಅದಕ್ಕಾಗಿ

ದುಃಖಪಡುವುದುಚಿತವಲ್ಲ. ದೇಹವೇ ಜೀವನೆನ್ನುವರು ಮಿಧ್ಯಾಜ್ಞಾನಿಗಳಾದ್ದರಿಂದ ಆ ಮಾತನ್ನು ಬಿಡು. ಇನ್ನಾವುದಕ್ಕೆ ನಿನ್ನ ದುಃಖ? ಅಬಿಮಾನ, ಅಜ್ಞಾನ, ಇವೆರಡೇ ಶೋಕ ಕಾರಣಗಳಾಗಿವೆ. ಆದ ಕಾರಣ ದರ್ಮರಾಜಾ! ಈ ನಿನ್ನ ಮನಸ್ಸಿನ ಅಜ್ಞಾನವನ್ನು ತಡೆ, ಅಬಿಮಾನವನ್ನು ಬಿಡು! ನಾನಿಲ್ಲದಿರೆ ಮುದುಕರ ಪಾಡೇನು, ಎಂಬುವ ಅಹಂಕಾರವನ್ನು ತ್ಯಜಿಸು. ಜ್ಞಾನವನ್ನು ಕೂಡು. ಈ ದೇಹವು ಪಂಚಬೂತ ರಚಿತವು. ಪ್ರಾಕೃತವು. ಕಾಲದಿಂದ ಕರ್ಮಾದೀನವಾಗಿ ಬರುವದು, ಹೋಗುವದು. ಇಂತಹ ಅನಿತ್ಯದೇಹದಲ್ಲಿದ್ದ ನೀನನ್ಯರನ್ನು ಸಲಹುವೆನೆಂಬುವದು ಹಾವಿನ ಬಾಯಿಗೆ ಸಿಕ್ಕ ಕಪ್ಪೆಯು ತನ್ನ ಮರಿಯನ್ನು ಕಾಪಾಡುವೆನೆಂದು ತಿಳಿದಂತೆಯೇ ಸರಿ! ನೋಡು ದೈವಚಿತ್ತವನ್ನು! ಜೀವನಿಗಿನ್ನೊಬ್ಬ ಜೀವನನ್ನಾಹಾರವಾಗಿರಿಸಿ ಸ್ಥಿತಿಕಾರ್ಯವನ್ನು ನಡೆಸುವ ಸರ್ವೇಶ್ವರನ ಲೀಲೆಯು ಅಮೋಘವಾಗಿದೆ. ಕೈಯಿಲ್ಲದ ಪಕ್ಷಿಗಳನ್ನು ಕೈಯುಳ್ಳ ನರರಿಗೆ, ಪಾದಗಳಿಲ್ಲದ ತೃಣಾದಿಗಳನ್ನು ಚತುಷ್ಪದ ಜಂತುಗಳಿಗೆ, ಚಿಕ್ಕವರಾದವರನ್ನು ದೊಡ್ಡವರಿಗೆ, ನರರನ್ನು ರಾಕ್ಷಸರಿಗೆ ಆಹಾರವನ್ನಾಗಿ ವಿದಿಸಿರುವನು! ಇದಕ್ಕೇಕೆ ಚಿಂತಿಸುವೆ? ಜೀವರ ಸರ್ವಸ್ವಗಳಿಗೆ ಆದಾನಾದಿಕರ್ತನಾದ ಬಗವಂತನು ಸರ್ವೋತ್ತಮನಾಗಿರುವನು. ಒಳಹೊರಗೆ ತುಂಬಿರುವನು. ತನ್ನ ಮಹಿಮೆಯನ್ನು ನೋಡುತ್ತಾ ತಾನೇ ಹಿಗ್ಗಿ ಸಮಾದಿಕ ರಹಿತನಾಗಿರುವನು. ಆ ಸ್ವಾಮಿಯೇ ಇಂದು ಸುಜನ ರಕ್ಷಕನೂ ದುಷ್ಟಶಿಕ್ಷಕನೂ ಆಗಿ ಅವತರಿಸಿ ಯದುಕುಲವನ್ನಲಂಕರಿಸಿರುವನು. ಆಯಿತಿನ್ನವನ ದೇವಕಾರ್ಯವು! ಆನಂದನಂದನನೀ ಮಹೀಮಂಡಲವನ್ನೆಂದು ಬಿಡುವನೋ ಪಾಂಡವರೇ! ಎಚ್ಚರದಿಂದಿರಿ! ನಿಮ್ಮ ತಂದೆಯಾದ ದೃತರಾಷ್ಟ್ರನು ಕುಂತೀ ಗಾಂದಾರಿಯರಿಂದ ಕೂಡಿ ಹಿಮವತ್ಪರ್ವತದ ದಕ್ಷಿಣದಲ್ಲಿರುವ ಸಪ್ತಸ್ರೋತವೆಂಬುವ ಪುಣ್ಯಾಶ್ರಮವನ್ನು ಸೇರಿ ತಪವನ್ನು ಗೈಯುತ್ತಿರುವನು. ಅಲ್ಲಿ ಮಂದಾಕಿನಿಯು ಏಳು ಸರಳಾಗಿ ಹರಿಯುತ್ತಿರುವಳು. ಸಪ್ತಋಷಿಗಳ ಆಶ್ರಮಗಳಲ್ಲಿರುವವು. ಅಂತಹ ಸಪ್ತಸ್ರೋತದಲ್ಲಿ ಮೂರು ಸಂಧ್ಯೆಗಳಲ್ಲಿಯು ಮಿಂದು ಹೋಮಾದಿಗಳನ್ನು ಮಾಡಿ ನಿರಾಹಾರನೂ ಉಪಶಾಂತಚಿತ್ತನೂ ಆಗಿರುವನು. ನಷ್ಟಮಾಂಸದೃಷ್ಟಿಯಾದಾ ನೃಪನ ಬುದ್ಧಿಯು ನಿರಂತರ ಹರಿಚಿಂತನ ಸಮರ್ದವಾಯಿತು. ಅವನು ಆಸನವನ್ನು ಕಲ್ಪಿಸಿ ಶ್ವಾಸವನ್ನು ಜಯಿಸಿ ಇಂದ್ರಿಯಂಗಳನ್ನು ವಿಷಯ ವಿಮುಖಂಗಳ ಮಾಡಿ ಮನದಾ ಹರಿಯ ನೆನೆದು ತ್ರಿಗುಣಾತ್ಮಕವಾದ ಪ್ರಾಕೃತ ಮಲಗಳಂ ತೊಡೆದುಹಾಕಿದನು. "ಸರ್ವಜಗವು ವಿರಿಂಚಾದೀನವು. ವಿಜ್ಞಾನ ಪ್ರಬುವಾದ ಬ್ರಹ್ಮನು ಕ್ಷೇತ್ರಜ್ಞನೆನಿಸುವ ಹರ್ಯದೀನನು. ಆ ಕ್ಷೇತ್ರಜ್ಞನು ಪುರುಷನೆನಿಸುವನು. ಹೊರಗಿರುವ ಕಾಲನಾಮಕ ಹರಿಯು ಸರ್ವಾದಾರನಾಗಿರುವನು. ಪುರುಷ ಕಾಲರಿಗೆ ಬೇದವಿಲ್ಲ" ಎಂದೀ ರೀತಿ ಲಯ ಚಿಂತನವನ್ನು ಮಾಡಿದನು. ಇಂದ್ರಿಯ ವ್ಯಾಪಾರವನ್ನು ಬಂದಿಸಿ ಆಹಾರವನ್ನು ತ್ಯಜಿಸಿ ಸ್ಥಾಣುವಿನಂತೆ ಇರುವನು. ಸಕಲಕರ್ಮಗಳನ್ನು ಬಗವದರ್ಪಿತವಾಗಿ ಮಾಡಿದ ಆ ನಿನ್ನ ದೊಡ್ಡಪ್ಪನಿಗೆ ವ್ಯಾಸರ ಕೃಪೆಯಿಂದ ಯಾವ ವಿಘ್ನವೂ ಬರಲಿಲ್ಲ. ಇಂದಿನಿಂದ ಐದನೆಯ ದಿನದಲ್ಲಿ ಕಳೇಬರವಂ ಬಿಟ್ಟು ಆ ರಾಜನ ಶರೀರವು ಭಸ್ಮವಾಗುವದು. ಕುಟೀರದಲ್ಲಿದ್ದ ದೃತರಾಷ್ಟ್ರನ

ಶರೀರವು ನಷ್ಟವಾದುದನ್ನು ಕಂಡು ಹೊರಗಿದ್ದ ಕುಂತೀ ಗಾಂಧಾರಿಯರು ತತ್‌ಕ್ಷಣವೇ ಕುಟೀರವನ್ನು ಪ್ರವೇಶಿಸಿ ತಾವೂ ದಗ್ಧರಾಗುವರು

ಹೀಗೆ ನಾರದನು ಕಾಲವ್ಯತ್ಯಾನದಿಂದ ಐದು ದಿನದ ಹಿಂದೆ ಮೃತರಾದ ಧೃತ ರಾಷ್ಟ್ರಾದಿಗಳ ವಿಷಯವನ್ನು ಮುಂದೆ ನಡೆಯುವದೆಂದು ಹೇಳಿದುದು ದರ್ಮರಾಜಾದಿಗಳ ವ್ಯನನವನ್ನು ನೋಡಲಾಗದೆ ಕರುಣೆಯಿಂದ ಹೊರತು ಅನ್ಯದಾ ಅಲ್ಲ. ವಿದುರನಾದರೂ ಯುದ್ಧಾನಂತರದಲ್ಲಿ ತೀರ್ದಯಾತ್ರೆಯನ್ನು ಮಾಡಿ ಬಂದು ಅಣ್ಣನಿಂದ ನಪ್ತನ್ರೋತದಲ್ಲಿ ತಪವಂ ಗೈಯುತ್ತಾ ಒಂದು ನಲ ಬಂದ ದರ್ಮರಾಜನೊಡನೆ ಐಕ್ಯವನ್ನು ಪೊಂದಿದ ನೆಂಬುದು ನರ್ವವಿದಿತವೇ" ಎಂದು ನುಡಿದು ನಾರದನು ತುಂಬುರುನೊಡಗೂಡಿ ಹೊರಟು ಹೋದನು ದರ್ಮರಾಜನಾದರೂ ಅವರ ಹಿತವಚನವನ್ನಾಲಿಸಿ ಶೋಕವನ್ನು ತ್ಯಜಿಸಿದನು

## ೧೩. ಅಪಶಕುನಗಳ ದರ್ಶನ—ಧರ್ಮರಾಜನ ಪ್ರಶ್ನೆ

ಶ್ರೀಕೃಷ್ಣನು ದ್ವಾರಕೆಗೆ ಪೋದ ಮೇಲೆ ಕೆಲವು ದಿನಗಳಾದವು. ಅರ್ಜುನನು ಕೂಡ ಆ ಗೋವಿಂದ ಹಿಂದೆ ಹೋಗಿದ್ದನು. ದರ್ಮರಾಜನು ಹಸ್ತಿನಾಪುರದಲ್ಲಿ ರಾಜ್ಯಪಾಲನೆ ಗೈಯುತ್ತಾ ದುಶ್ಶಕುನಗಳನ್ನು ಕಂಡು ಚಕಿತನಾದನು. ಕಾಲಗತಿಯು ಬಯಂಕರವಾಯಿತು. ಋತುದರ್ಮಗಳು ವ್ಯನ್ತವಾದವು ನರರು ಪಾಪದಿಂದ ಜೀವಿಸಿದರು ಕ್ರೋದ, ಲೋಬ, ಅನತ್ಯಗಳು ಹೆಚ್ಚಾದವು ವ್ಯವಹಾರವೆಲ್ಲವೂ ಕಾಪಟ್ಯದಿಂದ ತುಂಬಿತ್ತು. ಸ್ನೇಹವು ಪ್ರಯೋಜನವು ತೀರಲು ಕೊನೆಗೊಂಡಿತು. ತಂದೆಮಕ್ಕಳು, ಗಂಡಹೆಂಡತಿಯರು, ಅಣ್ಣ ತಮ್ಮಂದಿರು, ಸ್ನೇಹಿತರು ಜಗಳವಾಡಲು ಉತ್ಸುಕರಾದರು. ಕಲಿಕಾಲದ ನಂಬಂದದಿಂದ ಜನರಿಗಾದ ಲೋಬಾದಿ ಪಾಪವರ್ತನೆಯನ್ನು ಕಂಡು ಚಿಂತೆಗೊಂಡು ದರ್ಮಜನು ಒಂದು ದಿನ ಬೀಮನೇನನನ್ನು ನೋಡಿ ಇಂತು ನುಡಿದನು

"ಶ್ರೀಕೃಷ್ಣನ ವಾರ್ತೆಯನ್ನು ತಿಳಿಯಲು ದ್ವಾರಕೆಗೆ ಪೋದ ಅರ್ಜುನನೇಕೆ ಹಿಂದಿ ರುಗಿ ಬರಲಿಲ್ಲ? ಬೀಮನೇನಾ! ಇಂದಿಗೆ ಏಳುಮಾನಗಳಾದುವಲ್ಲಾ! ಏನು ಅನರ್ದವು ನಂಬವಿಸಿತೋ? ದೇವರ್ಷಿಯಾದ ನಾರದನು ಪೇಳಿದ ಆ ಕೃಷ್ಣನಿರ್ಯಾಣಕಾಲವೀಗ ಬಂತೋ ಏನು? ನಮ್ಮ ರಾಜ್ಯ, ನಂಪತ್ತು, ಪತ್ನೀಪುತ್ರರು, ಪ್ರಾಣಗಳು ಕೂಡ ಯಾರ ಅನುಗ್ರಹದಿಂದ ಉಳಿದಿವೆಯೋ, ಯಾರ ದಯೆಯನ್ನು ಅವಲಂಬಿಸಿ ನಾವು ಶತ್ರುಗಳನ್ನು ಗೆದ್ದೆವೋ, ಸ್ವರ್ಗಾದಿ ಪುಣ್ಯಲೋಕ ನದೃಶ ಸೌಖ್ಯವನ್ನನುಬವಿಸಿದೆವೋ, ಅಂತಹ ಶ್ರೀಕೃಷ್ಣನೆಮ್ಮನ್ನಗಲಿ ತನ್ನ ಕ್ರೀಡಾಂಗಣವೆನಿಸಿದ ಭೂಲೋಕವನ್ನು ತ್ಯಜಿಸಿದನೇ? ನೋಡೀ ಉತ್ಪಾತಂಗಳನ್ನು ವೃಕೋದರಾ! ಬೂಕಂಪ, ಉಲ್ಕಾಪಾತ, ನೇತ್ರಸ್ಪಂದನಾದಿ ಆದಿಬೌತಿಕ, ಆದಿದೈವಿಕ, ಆದ್ಯಾತ್ಮಿಕ ನಿಮಿತ್ತಗಳು ಯಾವ ಘೋರ ವಿಪತ್ತನ್ನು ನೂಚಿನುತ್ತಿವೆ? ನನಗೆ ಬಯವಾಗುತ್ತಿದೆ ಹುಚ್ಚು ಹಿಡಿದಂತಾಗಿರುವೆನು. ನನ್ನ ಎಡಗಣ್ಣು ಎಡಬುಜ ತೊಡೆಗಳು ಅದುರುತ್ತಿವೆ ಗುಂಡಿಗೆಯು ದಡದಡ ಹೊಡೆದುಕೊಳ್ಳುತ್ತಿದ ಈ ನರಿಯನ್ನು ನೋಡು ನೂರ್ಯಾಬಿಮುಖವಾಗಿ ಬಾಯಲ್ಲಿ ಕಿಡಿಯನ್ನು ಕಾರುತ್ತ, ಓ ಎಂದು ರೋದಿನುತ್ತಿದೆ.

